# ಆತ್ಮ ಸಾಕ್ಷಾತ್ಕಾರ

## ಪಡೆಯಲು ಸರಳ ಮತ್ತು ಪರಿಪೂರ್ಣವಾದ ವಿಜ್ಞಾನ



Kannada

ಜ್ಞಾನೀಪುರುಷ ದಾದಾಶ್ರೀ (ದಾದಾ ಭಗವಾನ್)

ಜ್ಞಾನಿ ಪುರುಷ್ ದಾದಾ ಭಗವಾನ್‌ರವರ ದಿವ್ಯವಾಣಿ

ಸಂಕಲನ: ಪೂಜ್ಯಶ್ರೀ ದೀಪಕ್‌ಭಾಯ್ ದೇಸಾಯಿ

# ಆತ್ಮಸಾಕ್ಷಾತ್ಕಾರ
# ಪ್ರಾಪ್ತಿಗಾಗಿ ಸರಳ ಮತ್ತು ನಿಖರ ವಿಜ್ಞಾನ

**ಪ್ರಕಾಶಕರು: ಶ್ರೀ ಅಜೀತ್ ಸಿ. ಪಟೇಲ್, ಮಹಾವಿದೇಹ್ ಫೌಂಡೇಶನ್, 5, ಮಮತಾಪಾರ್ಕ್ ಸೊಸೈಟಿ, ಉಸ್ಮಾನ್‌ಪುರಾ, ಅಹಮದಾಬಾದ್ – 380014 ಫೋನ್: (079) 39830100**



**ಮೊದಲ ಪ್ರಕಟಣೆ: 1000 ಪ್ರತಿಗಳು ಡಿಸೆಂಬರ್ 2017**

**ಭಾವ ಮೂಲ್ಯ: 'ಪರಮ ವಿನಯ' ಮತ್ತು 'ನನಗೇನೂ ತಿಳಿಯದು' ಎಂಬ ಭಾವ!**

**ಮುದ್ರಕರು: ಮಹಾವಿದೇಹ್ ಫೌಂಡೇಶನ್, ಪಾರ್ಶ್ವನಾಥ್ ಚೇಂಬರ್ಸ್ ಉಸ್ಮಾನ್‌ಪುರಾ, ಅಹಮದಾಬಾದ್**

## ‘ದಾದಾ ಭಗವಾನ್’ ಯಾರು?

1958ರ ಜೂನ್ ಮಾಸದ ಒಂದು ಸಂಜೆ, ಸುಮಾರು ಆರು ಗಂಟೆಯಾಗಿರಬಹುದು. ಜನಜಂಗುಳಿಯಿಂದ ತುಂಬಿಹೋಗಿದ್ದ ಸೂರತ್ ಪಟ್ಟಣದ ರೈಲ್ವೇ ನಿಲ್ದಾಣದ ಪ್ಲಾಟ್‌ಫಾರ್ಮ್ ಸಂ. 3ರ ಒಂದು ಬೆಂಚಿನ ಮೇಲೆ ಶ್ರೀ ಎ. ಎಮ್. ಪಟೇಲ್ ಎಂಬ ಹೆಸರಿನ ದೇಹರೂಪಿ ಮಂದಿರದಲ್ಲಿ, ಅಕ್ರಮ ರೂಪದಲ್ಲಿ, ಪ್ರಕೃತಿಯ ಲೀಲೆಯಂತೆ, ‘ದಾದಾ ಭಗವಾನ್’ ರವರು ಸಂಪೂರ್ಣವಾಗಿ ಪ್ರಕಟರಾದರು. ಪ್ರಕೃತಿಯು ಅಧ್ಯಾತ್ಮದ ಅದ್ಭುತ ಆಶ್ಚರ್ಯವನ್ನು ಸೃಷ್ಟಿಸಿತು. ಒಂದು ಗಂಟೆಯೊಳಗೆ ಅವರಿಗೆ ವಿಶ್ವದರ್ಶನವಾಯಿತು. ‘ನಾನು ಯಾರು? ದೇವರು ಯಾರು? ಜಗತ್ತನ್ನು ನಡೆಸುವವರು ಯಾರು? ಕರ್ಮ ಎಂದರೆ ಏನು? ಮುಕ್ತಿ ಎಂದರೆ ಏನು?’ ಎಂಬ ಜಗತ್ತಿನ ಎಲ್ಲಾ ಆಧ್ಯಾತ್ಮಿಕ ಪ್ರಶ್ನೆಗಳ ಸಂಪೂರ್ಣ ರಹಸ್ಯ ಪ್ರಕಟಗೊಂಡಿತು. ಈ ರೀತಿ, ಪ್ರಕೃತಿಯು ಜಗತ್ತಿನ ಮುಂದೆ ಒಂದು ಅದ್ವಿತೀಯ ಪೂರ್ಣ ದರ್ಶನವನ್ನು ಪ್ರಸ್ತುತಪಡಿಸಿತು ಹಾಗು ಇದಕ್ಕೆ ಒಂದು ಮಾಧ್ಯಮವಾದರು, ಗುಜರಾತಿನ ಚರೋತರ್ ಪ್ರದೇಶದ ಭಾದರಣ್ ಎಂಬ ಹಳ್ಳಿಯ ಪಟೇಲರಾಗಿದ್ದ, ವೃತ್ತಿಯಲ್ಲಿ ಕಾಂಟ್ರಾಕ್ಟರಾಗಿದ್ದ, ಸಂಪೂರ್ಣವಾಗಿ ರಾಗದ್ವೇಷದಿಂದ ಮುಕ್ತರಾಗಿದ್ದ ಶ್ರೀ ಎ. ಎಮ್. ಪಟೇಲ್‌ರವರು!

‘ವ್ಯಾಪಾರದಲ್ಲಿ ಧರ್ಮವಿರಬೇಕು, ಧರ್ಮದಲ್ಲಿ ವ್ಯಾಪಾರವಲ್ಲ’, ಎಂಬ ಸಿದ್ಧಾಂತದ ಪಾಲನೆ ಮಾಡುತ್ತಾ ಇವರು ಇಡೀ ಜೀವನವನ್ನು ಕಳೆದರು. ಜೀವನದಲ್ಲಿ ಅವರು ಯಾರಿಂದಲೂ ಹಣ ತೆಗೆದುಕೊಳ್ಳಲಿಲ್ಲವಷ್ಟೇ ಅಲ್ಲ, ತಮ್ಮ ಭಕ್ತರಿಗೆ ತಮ್ಮ ಸಂಪಾದನೆಯ ಹಣದಲ್ಲಿ ಯಾತ್ರೆ ಮಾಡಿಸುತ್ತಿದ್ದರು.

ಅವರು ಅನುಭವಿಗಳಾಗಿದ್ದರು. ಅದೇ ರೀತಿ, ಅವರು ಸಿದ್ಧಿಸಿಕೊಂಡ ಅದ್ಭುತವಾದ ಜ್ಞಾನಪ್ರಯೋಗದ ಮೂಲಕ ಕೇವಲ ಎರಡೇ ಗಂಟೆಗಳಲ್ಲಿ ಬೇರೆ ಮುಮುಕ್ಷುಗಳಿಗೂ ಸಹ ಆತ್ಮಜ್ಞಾನದ ಅನುಭವ ಉಂಟಾಗುವಂತೆ ಮಾಡುತ್ತಿದ್ದರು. ಇದನ್ನು ಅಕ್ರಮ ಮಾರ್ಗ ಎಂದು ಕರೆಯಲಾಯಿತು. ಅಕ್ರಮ, ಅದರರ್ಥ ಯಾವುದೇ ಕ್ರಮವಿಲ್ಲದ ಹಾಗು ಕ್ರಮ ಎಂದರೆ ಹಂತ ಹಂತವಾಗಿ, ಒಂದರ ನಂತರ ಒಂದರಂತೆ ಕ್ರಮವಾಗಿ ಮೇಲೇರುವುದು ಎಂದು. ಅಕ್ರಮ ಎಂದರೆ ಲಿಫ್ಟ್ ಮಾರ್ಗ, ಒಂದು ಶಾರ್ಟ್‌ಕಟ್.

ಅವರು ತಾವೇ ಪ್ರತಿಯೊಬ್ಬರಿಗೂ ‘ದಾದಾ ಭಗವಾನ್ ಯಾರು?’ ಎಂಬುದರ ರಹಸ್ಯದ ಬಗ್ಗೆ ಹೇಳುತ್ತಾ ನುಡಿಯುತ್ತಿದ್ದರು “ನಿಮ್ಮ ಎದುರು ಕಾಣುತ್ತಿರುವವರು ‘ದಾದಾ ಭಗವಾನ್’ ಅಲ್ಲ. ನಾನು ಜ್ಞಾನಿ ಪುರುಷ. ನನ್ನೊಳಗೆ ಪ್ರಕಟಗೊಂಡಿರುವವರು ‘ದಾದಾ ಭಗವಾನ್’. ದಾದಾ ಭಗವಾನ್ ಹದಿನಾಲ್ಕು ಲೋಕಗಳಿಗೂ ಒಡೆಯರು. ಅವರು ನಿಮ್ಮಲ್ಲೂ ಇದ್ದಾರೆ, ಎಲ್ಲರಲ್ಲೂ ಇದ್ದಾರೆ. ನಿಮ್ಮಲ್ಲಿ ಅವ್ಯಕ್ತರೂಪದಲ್ಲಿದ್ದಾರೆ ಮತ್ತು ‘ಇಲ್ಲಿ’ ನನ್ನೊಳಗೆ ಸಂಪೂರ್ಣ ರೂಪದಲ್ಲಿ ಪ್ರಕಟಗೊಂಡಿದ್ದಾರೆ. ದಾದಾ ಭಗವಾನ್‌ರವರಿಗೆ ನಾನೂ ನಮಸ್ಕಾರ ಮಾಡುತ್ತೇನೆ.”

# ಅಕ್ರಮ ವಿಜ್ಞಾನ

# ಆತ್ಮಸಾಕ್ಷಾತ್ಕಾರ

### ಪ್ರಾಪ್ತಿಗಾಗಿ ಸರಳ ಮತ್ತು ನಿಖರ ವಿಜ್ಞಾನ

## 1. ಮಾನವ ಜೀವನದ ಗುರಿ ಏನು?

ಇಡೀ ಜೀವನವೇ ಫ್ರ್ಯಾಕ್ಚರ್ ಆದಂತಿದೆ. ಏಕೆ ಬದುಕುತ್ತಿದ್ದೇವೆ ಎಂಬುದರ ಪರಿವೆಯೂ ಇಲ್ಲವಾಗಿದೆ. ಇಂತಹ ಗುರಿಯೇ ಇಲ್ಲದ ಜೀವನ ಅರ್ಥಹೀನ. ಲಕ್ಷ್ಮಿ ಬಂದಾಗ ತಿಂದು–ಕುಡಿದು ಮಜಾ ಮಾಡಿ, ನಂತರ ಇಡೀ ದಿನ ಚಿಂತೆಯಲ್ಲಿ ಕಳೆಯುತ್ತೇವೆ, ಇದು ಜೀವನದ ಗುರಿಯಾಗಲು ಹೇಗೆ ತಾನೆ ಸಾಧ್ಯ? ಮಾನವ ಜನ್ಮವನ್ನು ಸುಮ್ಮನೆ ವ್ಯರ್ಥ ಮಾಡುವುದರ ಅರ್ಥವಾದರೂ ಏನು? ಹಾಗಿದ್ದರೆ ಮಾನವ ಜನ್ಮ ಪಡೆದು ತನ್ನ ಗುರಿಯನ್ನು ತಲುಪಲು ಏನು ಮಾಡಬೇಕು? ಸಂಸಾರದ ಸುಖ, ಅಂದರೆ ಭೌತಿಕವಾದ ಸುಖವನ್ನು ಬಯಸುತ್ತೀರಾದರೆ ನಿಮ್ಮ ಹತ್ತಿರ ಏನಿದೆಯೋ ಅವೆಲ್ಲವನ್ನೂ ಜನರೊಂದಿಗೆ ಹಂಚಿಕೊಳ್ಳಿ.

ಈ ಪ್ರಪಂಚದ ಕಾನೂನನ್ನು ಒಂದೇ ವಾಕ್ಯದಲ್ಲಿ ಅರ್ಥಮಾಡಿಕೊಳ್ಳಿ, ಈ ಜಗತ್ತಿನ ಎಲ್ಲಾ ಧರ್ಮಗಳ ಸಾರವೇ ಇದಾಗಿದೆ, 'ಮನುಷ್ಯ, ತಾನು ಸುಖವನ್ನು ಬಯಸುವುದಾದರೆ ಬೇರೆ ಜೀವಗಳಿಗೂ ಸುಖವನ್ನು ನೀಡಬೇಕು, ದುಃಖವನ್ನು ಬಯಸುವುದಾದರೆ ದುಃಖವನ್ನು ನೀಡಬೇಕು'. ಯಾವುದು ಅನುಕೂಲವೋ ಅದನ್ನು ನೀಡಿ. ಈ ವಿಷಯವಾಗಿ ಯಾರಾದರೂ ನಮ್ಮ ಹತ್ತಿರ ಹಣವೇ ಇಲ್ಲ, ನಾವು ಜನರಿಗೆ ಹೇಗೆ ಸುಖ ನೀಡುವುದು ಎಂದು ಕೇಳಿದರೆ, ಹಣದಿಂದಲೇ ಸುಖ ನೀಡಬಹುದು ಎಂದೇನೂ ಇಲ್ಲ. ಅದರ ಬದಲಿಗೆ ಒಬ್ಲೈಜಿಂಗ್ ನೇಚರ್ (ಉಪಕಾರಿ ಸ್ವಭಾವ) ರೂಢಿಸಿಕೊಳ್ಳಬಹುದು, ಏನಾದರೂ ತಂದುಕೊಡಬೇಕಿದ್ದರೆ ತಂದುಕೊಡುವುದು ಅಥವಾ ಸಲಹೆ ನೀಡುವುದು ಹೀಗೇ ಒಬ್ಲೈಜ್ ಮಾಡಲು ಹಲವು ದಾರಿಗಳಿವೆ.

## ಎರಡು ವಿಧದ ಗುರಿಗಳು, ಸಾಂಸಾರಿಕ ಹಾಗು ಆತ್ಯಂತಿಕ

ಎರಡು ವಿಧದ ಗುರಿಗಳನ್ನು ಇರಿಸಿಕೊಳ್ಳಬೇಕು. ಮೊದಲನೆಯ ಗುರಿ, ನಾವು ಹೇಗೆ ಬದುಕಬೇಕೆಂದರೆ ನಮ್ಮಿಂದಾಗಿ ಯಾರಿಗೂ ಕಷ್ಟ ಅಥವಾ ದುಃಖವಾಗಬಾರದು. ನಾವು ಒಳ್ಳೆಯವರ, ಸತ್ಸಂಗದಲ್ಲಿರುವಂತಹ ಶ್ರೇಷ್ಠ ಪುರುಷರ, ಸತ್ಯವಂತರ ಸಂಗದಲ್ಲಿರಬೇಕು ಹಾಗು ಕುಸಂಗದಲ್ಲಿ ಬೀಳಬಾರದು. ಎರಡನೇ ಗುರಿ, ಪ್ರತ್ಯಕ್ಷ ಜ್ಞಾನಿಪುರುಷರು ದೊರೆತರೆ ಅವರ

ಸತ್ಸಂಗದಲ್ಲೇ ಇರುವುದು (ಅವರಿಂದ ಆತ್ಮ ಜ್ಞಾನ ಪ್ರಾಪ್ತಿ ಮಾಡಿಕೊಂಡು). ಇದರಿಂದಂತೂ ನಿಮ್ಮೆಲ್ಲಾ ಕೆಲಸಗಳೂ ಕೈಗೂಡುತ್ತವೆ, ಎಲ್ಲಾ ಒಗಟುಗಳೂ ಪರಿಹಾರಗೊಳ್ಳುತ್ತವೆ ಹಾಗು ಮೋಕ್ಷಪ್ರಾಪ್ತಿಯಾಗುತ್ತದೆ.

ಮಾನವನ ಅಂತಿಮ ಗುರಿ ಏನು? **ಮೋಕ್ಷಕ್ಕೆ ಹೋಗುವುದೇ, ಅಂತಿಮ ಗುರಿಯಾಗಿದೆ. ನಿಮಗೂ ಕೂಡ ಮೋಕ್ಷಕ್ಕೆ ಹೋಗಬೇಕಲ್ಲವೇ?** ಎಲ್ಲಿಯವರೆಗೆ ಅಲೆದಾಡುವುದು? ಅನಂತ ಜನ್ಮಗಳಿಂದ ಅಲೆದಲೆದು ಇನ್ನೂ ಅಲೆಯುವುದರಲ್ಲಿ ಏನೂ ಉಳಿದೇ ಇಲ್ಲ ಅಲ್ಲವೇ! ಏಕೆ ಅಲೆಯಬೇಕಾಯಿತು? ಏಕೆಂದರೆ 'ನಾನು ಯಾರು' ಇದನ್ನೇ ಅರಿಯಲಿಲ್ಲ. ತನ್ನ ನಿಜವಾದ ಸ್ವರೂಪವನ್ನು ತಿಳಿಯಲಿಲ್ಲ. ತನ್ನ ನಿಜ ಸ್ವರೂಪವನ್ನು ಅರಿಯಬೇಕು. 'ನಾನು ಯಾರು' ಎಂದು ತಿಳಿಯುವ ಅಗತ್ಯವಿಲ್ಲವೇ? **ಇಷ್ಟೆಲ್ಲಾ ಅಲೆದಾಡಿದರೂ ಸಹ ತಿಳಿಯಲಾಗಲಿಲ್ಲವೇ ನಿಮಗೆ?** ಕೇವಲ ಹಣ ಸಂಪಾದನೆ ಮಾಡುವುದರ ಹಿಂದೆ ಓಡುತ್ತಿದ್ದೀರಾ, ಮೋಕ್ಷಕ್ಕಾಗಿ ಕೂಡ ಏನನ್ನಾದರೂ ಮಾಡಬೇಕೋ ಬೇಡವೋ? ವಾಸ್ತವದಲ್ಲಿ, ಮಾನವ ಪರಮಾತ್ಮನಾಗಲು ಸಾಧ್ಯವಿದೆ. ಪರಮಾತ್ಮಪದವನ್ನು ಪಡೆಯುವುದು ನಮ್ಮ ಅಂತಿಮ ಗುರಿಯಾಗಿದೆ.

## ಮೋಕ್ಷ, ಎರಡು ಹಂತಗಳಲ್ಲಿ

**ಪ್ರಶ್ನಕರ್ತ:** ಸಾಮಾನ್ಯವಾಗಿ ನಾವು ಮೋಕ್ಷವೆಂದರೆ ಜನನ ಮರಣಗಳಿಂದ ಬಿಡುಗಡೆ ಎಂದು ಅರ್ಥೈಸಿಕೊಳ್ಳುತ್ತೇವೆ.

**ದಾದಾಶ್ರೀ:** ಹೌದು, ಇದು ಸರಿಯೇ. ಆದರೆ, ಅದು ಅಂತಿಮವಾದ ಬಿಡುಗಡೆ, ಅದು ಎರಡನೇ ಹಂತವಾಗಿದೆ. ಮೊದಲ ಹಂತದಲ್ಲಿ ಮೋಕ್ಷವೆಂಬುದು ಸಾಂಸಾರಿಕ ದುಃಖಗಳು ಇಲ್ಲವಾಗುವುದನ್ನು ಸೂಚಿಸುತ್ತದೆ. ಸಂಸಾರದ ದುಃಖಗಳ ನಡುವೆಯೂ ಅದು ತಾಗದಂತೆ ಇರುವುದು, ಉಪಾಧಿಗಳ ನಡುವೆಯೂ ಸಮಾಧಿ ಹೊಂದಿರುವುದು, ಇದು ಮೊದಲ ಹಂತದ ಮೋಕ್ಷ. ದೇಹ ಬಿಟ್ಟ ನಂತರ ದೊರೆಯುವುದು ಆತ್ಯಂತಿಕ ಮೋಕ್ಷ, ಆದರೆ ಮೊದಲ ಮೋಕ್ಷ ಇಲ್ಲೇ ಆಗಬೇಕಾದುದು. ನನ್ನ (ಜ್ಞಾನಿ) ಮೋಕ್ಷವಂತೂ ಆಗಿಯೇಬಿಟ್ಟಿದೆಯಲ್ಲವೇ! ಸಂಸಾರದಲ್ಲಿದ್ದೂ ಅದಕ್ಕೆ ಅಂಟಿಕೊಳ್ಳದಂತೆ ಇರುವ ಮೋಕ್ಷ ಉಂಟಾಗಬೇಕು. ಆ ರೀತಿ, ಈ ಅಕ್ರಮ ವಿಜ್ಞಾನದಿಂದ ಆಗುವುದು ಸಾಧ್ಯವಿದೆ.

## 2. ಆತ್ಮಜ್ಞಾನದಿಂದ ಶಾಶ್ವತ–ಸುಖವನ್ನು ಪಡೆದುಕೊಳ್ಳುವುದು

ಜೀವಮಾತ್ರವು ಏನನ್ನು ಹುಡುಕುತ್ತದೆ? ಆನಂದವನ್ನು ಹುಡುಕುತ್ತದೆ, ಆದರೆ ಒಂದು ನಿಮಿಷವೂ ಆನಂದ ಸಿಗುವುದಿಲ್ಲ. ನೀವು ವಿವಾಹ ಸಮಾರಂಭಕ್ಕೇ ಹೋಗಿ ಅಥವಾ ಯಾವುದೇ ನಾಟಕಕ್ಕೇ ಹೋಗಿ, ಏನೇ ಮಾಡಿದರೂ ನಂತರ ದುಃಖ ಹಿಂದಿರುಗುತ್ತದೆ. ಯಾವ ಸುಖದ ನಂತರ ದುಃಖ ಬರುತ್ತದೋ ಅಂತಹ ಸುಖವನ್ನು ಸುಖವೆಂದು ಹೇಗೆ ಹೇಳುವುದು? ಅದನ್ನು ಮೂರ್ಛೆಯಲ್ಲಿನ ಆನಂದ ಎಂದು ಹೇಳಲಾಗುತ್ತದೆ. ಸುಖವೆಂಬುವುದು ಪರ್ಮನೆಂಟ್ ಆಗಿರುವಂಥದ್ದು. ಇವೆಲ್ಲಾ 'ಟೆಂಪರರಿ' ಸುಖಗಳಷ್ಟೇ ಅಲ್ಲ ಇವು ಕಲ್ಪಿತ ಸುಖಗಳು, ನಂಬಿಕೆಯಿಂದ ಉಂಟಾಗುವಂಥವು. ಪ್ರತಿಯೊಂದು ಆತ್ಮ ಏನನ್ನು ಹುಡುಕುತ್ತದೆ? ಎಂದೆಂದಿಗೂ ಇರುವಂತಹ ಸುಖ, ಶಾಶ್ವತ ಸುಖವನ್ನು ಹುಡುಕುತ್ತದೆ. ಅದು ಇದರಲ್ಲಿ ದೊರೆಯುತ್ತದೆ, ಅದರಲ್ಲಿ ದೊರೆಯುತ್ತದೆ, ಇದನ್ನು ತೆಗೆದುಕೊಂಡುಬಿಡಲೇ, ಹೀಗೆ ಮಾಡಲೇ, ಬಂಗಲೆ ಕಟ್ಟಿಸುವುದರಿಂದ ಸುಖ ಬರುತ್ತದೆ, ವಾಹನ ಖರೀದಿಸಿದರೆ ಸುಖ ದೊರೆಯುತ್ತದೆ ಎಂದುಕೊಂಡು, ಇದೇ ರೀತಿ ನಡೆದುಕೊಳ್ಳುತ್ತೇವೆ. ಆದರೆ ಏನೂ ದೊರೆಯುವುದಿಲ್ಲ. ಅಷ್ಟೇ ಅಲ್ಲ, ಇನ್ನೂ ಹೆಚ್ಚಿನ ಜಂಜಾಟಗಳಲ್ಲಿ ಸಿಲುಕಿಕೊಳ್ಳುತ್ತೇವೆ. ಸುಖ ನಮ್ಮೊಳಗೇ ಇದೆ, ಆತ್ಮದಲ್ಲೇ ಇದೆ. ಹೀಗಾಗಿ ಆತ್ಮಪ್ರಾಪ್ತಿಯಾದಾಗ ಮಾತ್ರ (ಸನಾತನ) ಸುಖ ಪ್ರಾಪ್ತವಾಗುತ್ತದೆ.

### ಸುಖ ಮತ್ತು ದುಃಖ

ಜಗತ್ತಿನಲ್ಲಿ ಎಲ್ಲರೂ ಸುಖವನ್ನೇ ಹುಡುಕುತ್ತಾರೆ ಆದರೆ ಸುಖದ ಪರಿಭಾಷೆಯನ್ನೇ ನಿರ್ಧರಿಸುವುದಿಲ್ಲ. 'ಸುಖ ಎಂಬುದು ಹೇಗಿರಬೇಕೆಂದರೆ ಸುಖದ ನಂತರ ದುಃಖ ಬರಲೇಬಾರದು ಆ ರೀತಿ ಇರಬೇಕು'. ಅಂತಹ ಒಂದಾದರೂ ಸುಖ ಜಗತ್ತಿನಲ್ಲಿದ್ದರೆ ಅದನ್ನು ಹುಡುಕಿಕೊಂಡು ಬನ್ನಿ. ಶಾಶ್ವತ ಸುಖವಂತೂ ತನ್ನೊಳಗೇ ಇದೆ. ತಾವೇ ಅನಂತ ಸುಖದ ಧಾಮಗಳಾಗಿದ್ದರೂ, ಜನರು ನಾಶವಾಗುವ ವಸ್ತುಗಳಲ್ಲಿ ಸುಖವನ್ನು ಹುಡುಕಲು ಹೊರಟಿದ್ದಾರೆ.

### ಸನಾತನ ಸುಖವನ್ನು ಅರಸುವಿಕೆ

ಯಾರಿಗೆ ಸನಾತನ ಸುಖ ಪ್ರಾಪ್ತವಾಗಿದೆಯೋ, ಮತ್ತು ಸಂಸಾರದ ದುಃಖಗಳು ತಾಗುವುದಿಲ್ಲವೋ, ಅಂತಹವರ ಆತ್ಮಕ್ಕೆ ಮುಕ್ತಿಯಾಯಿತೆಂದು ಅರ್ಥ. ಸನಾತನ ಸುಖ, ಅದರ

ಹೆಸರೇ ಮೋಕ್ಷ. ಬೇರೆ ಯಾವುದೇ ಮೋಕ್ಷದಿಂದ ನಾವು ಮಾಡುವುದಾದರೂ ಏನು? ನಮಗೆ ಬೇಕಾಗಿರುವುದು ಸುಖ. ನಿಮಗೆ ಸುಖ ಇಷ್ಟವಾಗುತ್ತದೋ ಇಲ್ಲವೋ, ಹೇಳಿ!

**ಪ್ರಶ್ನಕರ್ತ:** ಅದಕ್ಕಾಗಿಯೇ ತಾನೇ ಎಲ್ಲರೂ ಅಲೆಯುತ್ತಿರುವುದು.

**ದಾದಾಶ್ರೀ:** ಹೌದು, ಆದರೆ ಆ ಟೆಂಪರರಿ **ಸುಖವು ಬೇಕಾಗಿಲ್ಲ.** ಅಂತಹ ಸುಖದ ನಂತರ ದುಃಖ ಬರುತ್ತದೆ, ಹೀಗಾಗಿ ಅದು ಇಷ್ಟವಾಗುವುದಿಲ್ಲ. ದುಃಖವೇ ಬರದಂತಹ ಸನಾತನ ಸುಖ ಬೇಕಾಗಿದೆ. ಅಂತಹ ಸುಖ ದೊರೆತದ್ದೇ ಆದರೆ ಅದು ಮೋಕ್ಷ. ಮೋಕ್ಷದ ಅರ್ಥವೇನು? ಸಾಂಸಾರಿಕ ದುಃಖಗಳಿಲ್ಲದಿರುವುದು, ಅದೇ ಮೋಕ್ಷ! ಹೀಗಲ್ಲದೇ ಬೇರೆ ಯಾವ ರೀತಿಯಿಂದಲೂ ಯಾರಿಗೂ ದುಃಖ ಇಲ್ಲದಿರುವುದು ಸಾಧ್ಯವಿಲ್ಲ!

ಈ ಜಗತ್ತಿನ ವಿಜ್ಞಾನಿಗಳು ಹೊರಗಿನ ವಿಜ್ಞಾನದ ಸ್ಟಡಿ ಮಾಡುತ್ತಲೇ ಇರುತ್ತಾರೆ ಅಲ್ಲವೇ? ಆದರೆ ಇದು ಬೇರೊಂದು ವಿಜ್ಞಾನ. ತನ್ನನ್ನು ತನ್ನ ಸನಾತನ ಸುಖದೆಡೆ ಒಯ್ಯುವ ಇದನ್ನು ಆಂತರಿಕ ವಿಜ್ಞಾನ ಎಂದು ಕರೆಯಲಾಗುತ್ತದೆ. ಹೀಗಾಗಿ, ತನ್ನ ಸನಾತನ ಸುಖದ ಪ್ರಾಪ್ತಿ ಮಾಡಿಸುವಂಥದ್ದನ್ನು ಆತ್ಮವಿಜ್ಞಾನ ಎಂದು ಕರೆಯಲಾಗುತ್ತದೆ, ಹಾಗು ಯಾವುದು ತಾತ್ಕಾಲಿಕ ಸುಖ ದೊರೆಯುವಂತೆ ಮಾಡುತ್ತದೋ ಅದೆಲ್ಲವನ್ನೂ ಬಾಹ್ಯ ವಿಜ್ಞಾನ ಎಂದು ಕರೆಯಲಾಗುತ್ತದೆ. ಬಾಹ್ಯ ವಿಜ್ಞಾನವು ಕೊನೆಯಲ್ಲಿ ನಾಶವಾಗುತ್ತದೆ ಮತ್ತು ವಿನಾಶಕಾರಿಯಾಗಿರುತ್ತದೆ. ಈ ಅಕ್ರಮ ವಿಜ್ಞಾನವು ಸನಾತನವಾದುದು ಹಾಗು ನಮ್ಮನ್ನು ಸನಾತನರನ್ನಾಗಿ ಮಾಡುವಂಥದ್ದು.

## 3. I and My are Separate

### ಜ್ಞಾನಿಯೇ ಮೂಲದ ಸ್ಪಷ್ಟೀಕರಣ ನೀಡತಕ್ಕವರು

**'I'** (ನಾನು) ಭಗವಾನ್ ಆಗಿದೆ ಮತ್ತು **'My'** ಮಾಯೆಯಾಗಿದೆ. 'My' is Relative to 'I' (**'**ನನ್ನ' ಎಂಬುದರ ಸಂಬಂಧ **'**ನಾನು**'**ವಿನಿಂದಾಗಿ). 'I' is Real. ಆತ್ಮದ ಗುಣಗಳನ್ನು ಈ **'I'** ನಲ್ಲಿ ಆರೋಪಿಸಿದ ಮಾತ್ರಕ್ಕೇ ನಿಮ್ಮ ಶಕ್ತಿಗಳು ಬಹಳ ಹೆಚ್ಚಾಗುತ್ತವೆ. ಈ ತಿಳಿವಳಿಕೆ ಮೂಲ ಆತ್ಮ ಜ್ಞಾನಿಯ ಹೊರತು ಇತರರಿಂದ ದೊರೆಯಲು ಸಾಧ್ಯವಿಲ್ಲ. ಆದರೆ, ಈ **'I'** and **'My'** ನಿಜಕ್ಕೂ ಬೇರೆಬೇರೆಯೇ ಆಗಿವೆ. ಇದು ಎಲ್ಲರಿಗೂ, ಫಾರಿನ್ ಜನರಿಗೂ ಅರ್ಥವಾಗಿಬಿಟ್ಟರೆ ಅವರ ತಾಪತ್ರಯಗಳು ಬಹಳಷ್ಟು ಕಡಿಮೆಯಾಗಿ ಬಿಡುತ್ತವೆ. ಇದು ಒಂದು ಸೈನ್ಸ್ ಆಗಿದೆ. ಅಕ್ರಮ ವಿಜ್ಞಾನದ ಈ ಆಧ್ಯಾತ್ಮಿಕ research, ಒಂದು ಸಂಪೂರ್ಣ ಹೊಸ

ವಿಧಾನವಾಗಿದೆ. 'I' ಎಂಬುದು ತನ್ನ ಸ್ವಂತ ಅಸ್ತಿತ್ವದ ಭಾವವಾಗಿದೆ ಹಾಗು 'My' ಎಂಬುದು ಮಾಲೀಕತ್ವದ ಭಾವವಾಗಿದೆ.

## 'I' ಅಂಡ್ 'My' ಅನ್ನು ಸೆಪರೇಟ್ ಮಾಡಿ

Separate 'I' and 'My' with Separator ಎಂದು ನಿಮಗೆ ಹೇಳಿದರೆ, ನಿಮಗೆ 'I' ಅಂಡ್ 'My' ಅನ್ನು ಸೆಪರೇಟ್ ಮಾಡಲು ಸಾಧ್ಯವೇ? 'I' ಅಂಡ್ 'My' ಅನ್ನು ಸೆಪರೇಟ್ ಮಾಡಬೇಕೋ ಅಥವಾ ಬೇಡವೋ? ಇದನ್ನು ಜಗತ್ತಿನಲ್ಲಿ ಒಂದಲ್ಲ ಒಂದು ದಿನ ತಿಳಿಯಲೇಬೇಕಾಗುತ್ತದೆ ಅಲ್ಲವೇ? 'I' ಮತ್ತು 'My' ಅನ್ನು ಸೆಪರೇಟ್ ಮಾಡುವುದೆಂದರೆ, ಹೇಗೆ ಹಾಲಿಗೆ ಸೆಪರೇಟರ್ ಇರುತ್ತದೆಯೋ ಆಗ ಅದರಲ್ಲಿನ ಕೆನೆಯನ್ನು (ಬೇರ್ಪಡಿಸುವಂತೆ) ಸೆಪರೇಟ್ ಮಾಡುತ್ತಾರಲ್ಲವೇ? ಹಾಗೆಯೇ, ಇಲ್ಲಿ ಬೇರ್ಪಡಿಸಬೇಕು.

ನಿಮ್ಮ ಬಳಿ 'My' (ನನ್ನದು) ಅಂತಹ ಯಾವುದೇ ವಸ್ತುವಿದೆಯೇ? 'I' (ನಾನು) ಒಂಟಿಯಾಗಿದೆಯೋ ಅಥವಾ 'My' ಜೊತೆಯಲ್ಲಿದೆಯೋ?

**ಪ್ರಶ್ನಕರ್ತ:** 'My' ಜೊತೆಯಲ್ಲಿಯೇ ಇರಬೇಕಲ್ಲವೇ!

**ದಾದಾಶ್ರೀ:** ನಿಮ್ಮ ಬಳಿ ಯಾವ ಯಾವ 'My' ಇದೆ?

**ಪ್ರಶ್ನಕರ್ತ:** ನನ್ನ ಮನೆ ಮತ್ತು ನನ್ನ ಮನೆಯ ಎಲ್ಲಾ ವಸ್ತುಗಳು.

**ದಾದಾಶ್ರೀ:** ಎಲ್ಲವನ್ನೂ ನಿಮ್ಮದೆಂದು ಹೇಳಲಾಗುತ್ತದೆಯೇ? ಮತ್ತು ವೈಫ್ ಯಾರವಳು ಎಂದು ಹೇಳಬೇಕು?

**ಪ್ರಶ್ನಕರ್ತ:** ಅವಳೂ ನನ್ನವಳು.

**ದಾದಾಶ್ರೀ:** ಮಕ್ಕಳು ಯಾರವು?

**ಪ್ರಶ್ನಕರ್ತ:** ಅವರೂ ನನ್ನವರು.

**ದಾದಾಶ್ರೀ:** ಮತ್ತು ಈ ಗಡಿಯಾರ ಯಾರದ್ದು?

**ಪ್ರಶ್ನಕರ್ತ:** ಅದೂ ನನ್ನದೇ.

**ದಾದಾಶ್ರೀ:** ಮತ್ತು ಈ ಕೈ ಯಾರದ್ದು?

**ಪ್ರಶ್ನಕರ್ತ:** ಈ ಕೈ ಕೂಡಾ ನನ್ನದೇ ಆಗಿದೆ.

**ದಾದಾಶ್ರೀ:** ಹಾಗಿದ್ದರೆ 'ನನ್ನ ತಲೆ, ನನ್ನ ಶರೀರ, ನನ್ನ ಕಾಲು, ನನ್ನ ಕಿವಿ, ನನ್ನ ಕಣ್ಣುಗಳು' ಎಂದು ಹೇಳುತ್ತೇವೆ. ಈ ಶರೀರದ ಎಲ್ಲಾ ವಸ್ತುಗಳನ್ನು 'ನನ್ನದು' ಎಂದು ಹೇಳುತ್ತೇವೆ, ಹಾಗಿದ್ದರೆ 'ನನ್ನದು' ಎಂದು ಹೇಳುವಂತಹ 'ನೀವು' ಯಾರು? ಇದನ್ನು ಯೋಚಿಸಲಿಲ್ಲವೇ? 'ನನ್ನ ಹೆಸರು ಚಂದೂಭಾಯ್' ಎಂದು ಹೇಳಿ, ನಂತರ 'ನಾನು ಚಂದೂಭಾಯ್' ಎಂದು ಹೇಳಿದರೆ, ಇದು ವಿರೋಧಾಭಾಸ ಅನಿಸುವುದಿಲ್ಲವೇ?

**ಪ್ರಶ್ನಕರ್ತ:** ಅನಿಸುತ್ತದೆ.

**ದಾದಾಶ್ರೀ:** ನೀವು ಚಂದೂಭಾಯ್, ಆದರೆ ಇದರಲ್ಲಿ 'I' ಅಂಡ್ 'My' ಎರಡಿವೆ. 'I' ಅಂಡ್ 'My', ಇವುಗಳ ಎರಡು ರೈಲ್ವೆಹಳಿಗಳು ಬೇರೆಬೇರೆಯೇ ಆಗಿವೆ. ಸಮಾನಾಂತರದಲ್ಲಿಯೇ ಇರುತ್ತವೆ, ಎಂದೂ ಒಂದಾಗುವುದೇ ಇಲ್ಲ ಅಥವಾ ಏಕಾಕಾರವಾಗುವುದೇ ಇಲ್ಲ. ಆದರೂ ನೀವು ಏಕಾಕಾರವನ್ನು ಒಪ್ಪುತ್ತೀರಿ. ಇದನ್ನು ಅರ್ಥ ಮಾಡಿಕೊಂಡು, 'My' ಅನ್ನು ಸೆಪರೇಟ್ ಮಾಡಿ. ನಿಮ್ಮಲ್ಲಿರುವ 'My' ಎಂಬುದನ್ನು ಒಂದು ಪಕ್ಕಕ್ಕಿಡಿ. 'My' ಹಾರ್ಟ್, ಅದನ್ನು ಒಂದು ಪಕ್ಕಕ್ಕಿಡಿ. ಈ ಶರೀರದಿಂದ ಇನ್ನೂ ಏನೆಲ್ಲವನ್ನೂ ಸೆಪರೇಟ್ ಮಾಡಬೇಕಾಗುತ್ತದೆ?

**ಪ್ರಶ್ನಕರ್ತ:** ಕಾಲುಗಳು, ಇಂದ್ರಿಯಗಳು.

**ದಾದಾಶ್ರೀ:** ಹೌದು, ಎಲ್ಲವನ್ನೂ. ಐದು ಇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು–ಬುದ್ಧಿ–ಚಿತ್ತ–ಅಹಂಕಾರ ಎಲ್ಲವನ್ನೂ. ಹಾಗು 'ಮೈ ಇಗೋಇಜಮ್' ಎಂದು ಹೇಳುವುದೋ ಅಥವಾ 'ಐ ಆಮ್ ಇಗೋಇಜಮ್' ಎಂದು ಹೇಳುವುದೋ?

**ಪ್ರಶ್ನಕರ್ತ:** 'ಮೈ ಇಗೋಇಜಮ್'

**ದಾದಾಶ್ರೀ:** 'ಮೈ ಇಗೋಇಜಮ್' ಎಂದು ಹೇಳಿದರೆ, ಅದನ್ನು ಬೇರ್ಪಡಿಸಲು ಸಾಧ್ಯವಿದೆ ಎಂದರ್ಥ. ಆದರೆ ಅದಕ್ಕೂ ಮುಂದೆ ಏನಿದೆಯೋ ಅದರಲ್ಲಿ ನಿಮ್ಮ ಪಾಲೇನು, ಎಂಬುದನ್ನು ನೀವು ತಿಳಿದಿಲ್ಲ. ಆದ್ದರಿಂದ ಪೂರ್ಣ ರೂಪದಲ್ಲಿ ಸೆಪರೇಷನ್ ಸಾಧ್ಯವಾಗುವುದಿಲ್ಲ. ನೀವೇ ಸ್ವತಃ ಸ್ವಲ್ಪ ಮಟ್ಟದವರೆಗೂ ಸೆಪರೇಷನ್ ಮಾಡಲು ಸಾಧ್ಯವಿದೆ. ನಿಮಗೆ ತಿಳಿದಿರುವುದು ಸ್ಥೂಲವಸ್ತು ಮಾತ್ರ, ಸೂಕ್ಷ್ಮದ ಪರಿಚಯವೇ ನಿಮಗಿಲ್ಲ. ಸೂಕ್ಷ್ಮವನ್ನು ಬೇರ್ಪಡಿಸುವ,

ನಂತರ ಸೂಕ್ಷ್ಮತರವನ್ನು ಬೇರ್ಪಡಿಸುವ, ನಂತರ ಸೂಕ್ಷ್ಮತಮವನ್ನು ಬೇರ್ಪಡಿಸುವ ಕೆಲಸ ಜ್ಞಾನಿ ಪುರುಷರದ್ದೇ ಆಗಿರುತ್ತದೆ.

ಆದರೆ ಒಂದರ ನಂತರ ಒಂದರಂತೆ ಎಲ್ಲಾ ಸ್ಪೇರ್-ಪಾರ್ಟುಗಳನ್ನು ಬೇರ್ಪಡಿಸುತ್ತಾ ಹೋದರೆ 'I' ಮತ್ತು 'My' ಎರಡನ್ನೂ ಬೇರ್ಪಡಿಸಲು ಸಾಧ್ಯವಿದೆ ಅಲ್ಲವೇ? 'I' ಮತ್ತು 'My' ಎರಡನ್ನೂ ಬೇರ್ಪಡಿಸುತ್ತಾ ಹೋದರೆ ಕೊನೆಗೆ ಉಳಿಯುವುದೇನು? 'My' ಅನ್ನು ಒಂದು ಪಕ್ಕಕ್ಕಿರಿಸಿದರೆ ಕೊನೆಯಲ್ಲಿ ಉಳಿಯುವುದೇನು?

**ಪ್ರಶ್ನಕರ್ತ:** 'I'.

**ದಾದಾಶ್ರೀ:** ಆ 'I' ಎಂಬುದೇ ನೀವಾಗಿದ್ದೀರಿ! ಅಷ್ಟೇ ಇನ್ನೇನಿಲ್ಲ, ಆ 'I' ಅನ್ನು (ರಿಯಲೈಜ್ ಮಾಡಿಕೊಳ್ಳಬೇಕಾಗಿದೆ) ಅರಿಯಬೇಕಾಗಿದೆ.

ಆ ವಿಚಾರದಲ್ಲಿ ನಮ್ಮ ಅಗತ್ಯ ಉಂಟಾಗುತ್ತದೆ. ನಾನು ನಿಮ್ಮಲ್ಲಿ ಆ ಎಲ್ಲವನ್ನೂ ಬೇರ್ಪಡಿಸಿಬಿಡುತ್ತೇನೆ. ನಂತರ ನಿಮಗೆ 'ನಾನು ಶುದ್ಧಾತ್ಮ ಆಗಿದ್ದೇನೆ' ಎಂಬ ಅನುಭವ ಇರುತ್ತದೆ. ಅನುಭವ ಆಗಬೇಕು ಹಾಗು ಅದರೊಂದಿಗೆ "ಆತ್ಮವತ್ ಸರ್ವಭೂತೇಷು" ಎಂಬುದು (ಎಲ್ಲರಲ್ಲೂ ಆತ್ಮ) ಗೋಚರವಾಗಲು, ದಿವ್ಯಚಕ್ಷುಗಳನ್ನೂ ಸಹ ನೀಡುತ್ತೇನೆ.

## 4. 'ನಾನು' ವನ್ನು ಗುರುತಿಸುವುದು ಹೇಗೆ?

### ಜಪ-ತಪ, ವ್ರತ ಮತ್ತು ನಿಯಮ

**ಪ್ರಶ್ನಕರ್ತ:** ವ್ರತ, ತಪ, ನಿಯಮ ಅಗತ್ಯವೇ ಅಥವಾ ಇಲ್ಲವೇ?

**ದಾದಾಶ್ರೀ:** ಏನೆಂದರೆ, ಕೆಮಿಸ್ಟ್‌ನ ಬಳಿ ಯಾವೆಲ್ಲಾ ಔಷಧಿಗಳಿವೆಯೋ, ಅವೆಲ್ಲವೂ ಅಗತ್ಯವೇ, ಆದರೆ ಅವು ಬೇರೆಬೇರೆ ಜನರಿಗೆ ಅಗತ್ಯ. ನಿಮಗೆ ಯಾವ ಔಷಧ ಅಗತ್ಯವೋ ಅದನ್ನು ಮಾತ್ರ ನೀವು ತೆಗೆದುಕೊಂಡು ಹೋಗಬೇಕು. ಹಾಗೆಯೇ ವ್ರತ, ತಪ, ನಿಯಮ, ಈ ಎಲ್ಲವುಗಳ ಅಗತ್ಯವೂ ಇದೆ. ಈ ಜಗತ್ತಿನಲ್ಲಿ ಯಾವುದೂ ತಪ್ಪಲ್ಲ. ಜಪ-ತಪದಲ್ಲಿ ಯಾವುದೇ ತಪ್ಪೂ ಇಲ್ಲ. ಆದರೆ ಪ್ರತಿಯೊಬ್ಬರ ದೃಷ್ಟಿಕೋನದಿಂದ, ಪ್ರತಿಯೊಬ್ಬರ ಅಪೇಕ್ಷೆಗನುಗುಣವಾಗಿ ಎಲ್ಲವೂ ಸೂಕ್ತವೇ.

**ಪ್ರಶ್ನಕರ್ತ:** ತಪ ಮತ್ತು ಕ್ರಿಯೆಗಳಿಂದ ಮುಕ್ತಿ ದೊರೆಯುತ್ತದೆಯೇ?

**ದಾದಾಶ್ರೀ:** ತಪ ಮತ್ತು ಕ್ರಿಯೆಯಿಂದ ಫಲ ದೊರೆಯುತ್ತದೆ, ಮುಕ್ತಿ ದೊರೆಯುವುದಿಲ್ಲ. ಬೇವನ್ನು ಬಿತ್ತಿದರೆ ಕಹಿ ಫಲಗಳು ದೊರೆಯುತ್ತವೆ ಹಾಗು ಮಾವನ್ನು ಬಿತ್ತಿದರೆ ಸಿಹಿ ಫಲಗಳು ದೊರೆಯುತ್ತವೆ. ನಿಮಗೆ ಎಂತಹ ಫಲಗಳು ಬೇಕೋ ಅದಕ್ಕನುಸಾರವಾಗಿ ನೀವು ಬೀಜ ಬಿತ್ತಿ. ಮೋಕ್ಷಪ್ರಾಪ್ತಿಯ ತಪವಂತೂ ಬೇರೆಯೇ ಆಗಿರುತ್ತದೆ, ಅದು ಆಂತರಿಕ ತಪವಾಗಿರುತ್ತದೆ. ಹಾಗು ಜನರು ಹೊರಗಿನ ತಪವನ್ನು ಮಾತ್ರ ತಪ ಎಂದು ಅರ್ಥ ಮಾಡಿಕೊಂಡುಬಿಟ್ಟಿದ್ದಾರೆ. ಯಾವ ತಪಗಳು ಹೊರಗೆ ಕಂಡುಬರುತ್ತವೋ, ಅಂತಹ ತಪವಂತೂ ಮೋಕ್ಷದಲ್ಲಿ ಕೆಲಸಕ್ಕೆ ಬರುವುದೇ ಇಲ್ಲ, ಅವುಗಳ ಫಲಸ್ವರೂಪವಾಗಿ ಪುಣ್ಯ ದೊರೆಯುತ್ತದೆ. ಮೋಕ್ಷ ಮಾರ್ಗದಲ್ಲಿ ಹೋಗಲು ಆಂತರಿಕ ತಪ (ಅದೀಠ ತಪ) ಬೇಕಾಗುತ್ತದೆ.

**ಪ್ರಶ್ನಕರ್ತ:** ಮಂತ್ರಜಪದಿಂದ ಮೋಕ್ಷ ದೊರೆಯುತ್ತದೋ ಅಥವಾ ಜ್ಞಾನಮಾರ್ಗದಿಂದ ಮೋಕ್ಷ ದೊರೆಯುತ್ತದೋ?

**ದಾದಾಶ್ರೀ:** ಮಂತ್ರಜಪವು ನಿಮ್ಮ ಸಂಸಾರದಲ್ಲಿ ಶಾಂತಿಯನ್ನು ಉಂಟು ಮಾಡುತ್ತದೆ. ಮನಸ್ಸನ್ನು ಯಾವುದು ಶಾಂತಗೊಳಿಸುತ್ತದೋ ಅದು ಮಂತ್ರ, ಅದರಿಂದ ಭೌತಿಕವಾದ ಸುಖಗಳು ದೊರೆಯುತ್ತವೆ. ಮೋಕ್ಷವು ಜ್ಞಾನಮಾರ್ಗವಿಲ್ಲದೆ ಸಾಧಿಸಲು ಸಾಧ್ಯವಿಲ್ಲದ್ದು. ಅಜ್ಞಾನದಿಂದ ಬಂಧನ ಉಂಟಾಗಿದೆ ಹಾಗು ಜ್ಞಾನದಿಂದ ಮುಕ್ತಿ ಉಂಟಾಗುತ್ತದೆ. ಈ ಜಗತ್ತಿನಲ್ಲಿ ಯಾವ ಜ್ಞಾನ ಕಂಡುಬರುತ್ತದೋ, ಅದು ಇಂದ್ರಿಯಜ್ಞಾನವಾಗಿದೆ. ಅದೊಂದು ಭ್ರಾಂತಿಮಾತ್ರವಾಗಿದೆ, ಹಾಗು ಅತೀಂದ್ರಿಯ ಜ್ಞಾನವು ನಿಜವಾದ ಜ್ಞಾನವಾಗಿದೆ.

ಯಾರಿಗೆ ತನ್ನ ನಿಜವಾದ ಸ್ವರೂಪವನ್ನು ಗುರುತಿಸಿ ಮೋಕ್ಷವನ್ನು ಸಾಧಿಸಿಕೊಳ್ಳಬೇಕಾಗಿದೆಯೋ, ಅವರಿಗೆ ಕ್ರಿಯೆಗಳ ಅಗತ್ಯವಿಲ್ಲ. ಯಾರಿಗೆ ಭೌತಿಕ ಸುಖಗಳ ಅಗತ್ಯವಿದೆಯೋ ಅವರಿಗೆ ಕ್ರಿಯೆಗಳ ಅಗತ್ಯ ಇದೆ. ಯಾರು ಮೋಕ್ಷಮಾರ್ಗದಲ್ಲಿ ಹೋಗ ಬಯಸುತ್ತಾರೋ ಅವರಿಗೆ ಜ್ಞಾನ ಮತ್ತು ಜ್ಞಾನಿಯ ಆಜ್ಞೆ, ಕೇವಲ ಈ ಎರಡರ ಅಗತ್ಯ ಮಾತ್ರ ಇರುತ್ತದೆ.

## ಜ್ಞಾನಿಯೇ "ನಾನು"ವನ್ನು ಗುರುತಿಸುವಂತೆ ಮಾಡಬೇಕು!

**ಪ್ರಶ್ನಕರ್ತ:** ನಿನ್ನನ್ನು ನೀನು ಗುರುತಿಸು ಎಂದು ನೀವು ಹೇಳಿದಿರಿ, ಹಾಗಿದ್ದರೆ ನನ್ನನ್ನು ನಾನು ಗುರುತಿಸಲು ನಾನು ಏನು ಮಾಡಬೇಕು?

**ದಾದಾಶ್ರೀ:** ಅದಕ್ಕೆ ನನ್ನ ಬಳಿ ಬನ್ನಿ. ನನಗೆ 'ನನ್ನನ್ನು' ಗುರುತಿಸಿಕೊಳ್ಳಬೇಕಾಗಿದೆ ಎಂದು ಹೇಳಿಬಿಡಿ ಸಾಕು, ನಿಮ್ಮನ್ನು ಗುರುತಿಸುವಂತೆ ನಾನು ಮಾಡುತ್ತೇನೆ.

**ಪ್ರಶ್ನಕರ್ತ:** ‘ನಾನು ಯಾರು’ ಎಂದು ತಿಳಿಯುವುದು, ಈ ಸಂಸಾರದಲ್ಲಿ ಇದ್ದುಕೊಂಡು ಹೇಗೆ ಸಾಧ್ಯ?

**ದಾದಾಶ್ರೀ:** ಹಾಗಿದ್ದರೆ, ಅದನ್ನು ಎಲ್ಲಿದ್ದುಕೊಂಡು ತಿಳಿಯಲು ಸಾಧ್ಯವಾಗುತ್ತದೆ? ಸಂಸಾರವನ್ನು ಹೊರತುಪಡಿಸಿ ಇರಲು ಬೇರೆ ಯಾವುದಾದರೂ ಸ್ಥಳವಿದೆಯೇ? ಈ ಜಗತ್ತಿನಲ್ಲಿ ಎಲ್ಲರೂ ಸಂಸಾರಿಗಳೇ, ಹಾಗು ಎಲ್ಲರೂ ವಾಸಿಸುವುದು ಸಂಸಾರದಲ್ಲೇ. ‘ನಾನು ಯಾರು?’ ಎಂಬುದನ್ನು ಅರಿಯಲು ಇರುವಂತಹ ಸ್ಥಳವೇ ಇದಾಗಿದೆ. ‘ನೀವು ಯಾರು’ ಎಂಬುದನ್ನು ಅರಿಯುವುದಕ್ಕಾಗಿಯೇ ಈ ವಿಜ್ಞಾನ. ಇಲ್ಲಿಗೆ ಬನ್ನಿ, ನಿಮ್ಮನ್ನು ಗುರುತಿಸುವಂತೆ ನಾವು ಮಾಡುತ್ತೇವೆ.

## ಮೋಕ್ಷದ ಸರಳ ಉಪಾಯ

ಯಾರು ಮುಕ್ತರಾಗಿದ್ದಾರೋ ಅಂಥವರ ಬಳಿ ಹೋಗಿ, ‘ಸ್ವಾಮೀ ನನ್ನ ಮುಕ್ತಿಯನ್ನು ಸಾಧಿಸಿಕೊಡಿ’ ಎಂದು ಹೇಳಬೇಕು! ಇದೇ ಅಂತಿಮ ಉಪಾಯವಾಗಿದೆ, ಎಲ್ಲಕ್ಕಿಂತಲೂ ಒಳ್ಳೆಯ ಉಪಾಯ. ‘ತಾನು ಯಾರು’ ಎಂಬ ಜ್ಞಾನ ಖಚಿತವಾದರೆ, ಅಂಥವರಿಗೆ ಮೋಕ್ಷದ ಗತಿ ದೊರೆಯುತ್ತದೆ ಹಾಗು ಆತ್ಮಜ್ಞಾನಿ ದೊರೆಯದಿದ್ದರೆ, (ಅಲ್ಲಿಯವರೆಗೆ) ಆತ್ಮಜ್ಞಾನಿಯ ಪುಸ್ತಕಗಳನ್ನು ಓದಬೇಕು.

ಆತ್ಮವು ವೈಜ್ಞಾನಿಕ ವಸ್ತುವಾಗಿದೆ. ಅದು ಪುಸ್ತಕಗಳಿಂದ ದೊರೆಯುವಂತಹ ವಸ್ತುವಲ್ಲ. ಅದು ತನ್ನದೇ ಗುಣಧರ್ಮಗಳಿಂದ ಕೂಡಿದೆ, ಚೇತನವಾಗಿದೆ ಮತ್ತು ಅದೇ ಪರಮಾತ್ಮನಾಗಿದೆ. ಅದನ್ನು ಗುರುತಿಸಿದ್ದೇ ಆದರೆ ಕೆಲಸವಾಯಿತು ಎಂದರ್ಥ. ಎಲ್ಲವೂ ಮಂಗಳಕರವಾದಂತೆ ಹಾಗು ಅದು ‘ಸ್ವಂತ ನೀವೇ’ ಆಗಿರುತ್ತೀರಿ!

ಮೋಕ್ಷ ಮಾರ್ಗದಲ್ಲಿ ತಪ–ತ್ಯಾಗ ಏನನ್ನೂ ಮಾಡಬೇಕಾಗಿಲ್ಲ. ಜ್ಞಾನಿಪುರುಷರು ದೊರೆತರೆ, ಅಂತಹ ಜ್ಞಾನಿಯ ಆಜ್ಞೆಯೇ ಧರ್ಮ ಮತ್ತು ಆಜ್ಞೆಯೇ ತಪ. ಅದುವೇ ಜ್ಞಾನ, ದರ್ಶನ, ಸಚ್ಚಾರಿತ್ರ್ಯ ಮತ್ತು ತಪವಾಗಿದೆ. ಆ ಆಜ್ಞೆಯ ಪ್ರತ್ಯಕ್ಷಫಲ ಮೋಕ್ಷವೇ ಆಗಿದೆ.

‘ಜ್ಞಾನಿಪುರುಷರು’ ದೊರೆತಾಗ ಮಾತ್ರವೇ ಮೋಕ್ಷಮಾರ್ಗ ಸುಲಭ ಮತ್ತು ಸರಳವಾಗುತ್ತದೆ. ಖಿಚಡೀ (ಹುಗ್ಗಿ) ಮಾಡುವುದಕ್ಕಿಂತಲೂ ಸುಲಭವಾಗಿ ಬಿಡುತ್ತದೆ.

## 5. ‘ನಾನು’ವನ್ನು ಗುರುತಿಸುವುದು – ಜ್ಞಾನಿಪುರುಷರಿಂದ

### ಅಗತ್ಯವಾಗುವುದು ಗುರುವೋ ಅಥವಾ ಜ್ಞಾನಿಯೋ?

**ಪ್ರಶ್ನಕರ್ತ:** ದಾದಾಜೀರವರನ್ನು ಭೇಟಿ ಮಾಡುವ ಮೊದಲು ಯಾರನ್ನಾದರೂ ಗುರು ಎಂದು ಭಾವಿಸಿದ್ದರೆ? ಅಂಥವರು ಏನು ಮಾಡಬೇಕು?

**ದಾದಾಶ್ರೀ:** ಅವರಲ್ಲಿಗೆ ಹೋಗಿ, ಹೋಗುವುದು ಬೇಡವೆಂದಿದ್ದರೆ, ಅಗತ್ಯವೂ ಇಲ್ಲ. ನಿಮಗಿಷ್ಟವಿದ್ದರೆ ಹೋಗಿ, ಬೇಡವೆಂದಿದ್ದರೆ ಹೋಗಬೇಡಿ. ಅವರಿಗೆ ದುಃಖವಾಗಬಾರದೆಂಬ ಕಾರಣಕ್ಕಾಗಿ ಹೋಗಬೇಕು. ನೀವು ವಿನಯವಂತರಾಗಿರಬೇಕು. ಇಲ್ಲಿ ‘ಆತ್ಮಜ್ಞಾನ’ ತೆಗೆದುಕೊಳ್ಳುವ ಸಮಯದಲ್ಲಿ ನನ್ನನ್ನು ಯಾರಾದರೂ, ‘ನಾನೀಗ ಗುರುವನ್ನು ತೊರೆದುಬಿಡಲೇ?’ ಎಂದು ಕೇಳಿದರೆ, ನಾನು ಅವರಿಗೆ ‘ತೊರೆಯಬೇಡ! ಆ ಗುರುವಿನ ಮಹಿಮೆಯಿಂದಲೇ ನೀನು ಇಲ್ಲಿಯವರೆಗೆ ತಲುಪಲು ಸಾಧ್ಯವಾಗಿರುವುದು’ ಎಂದು ಹೇಳುತ್ತೇನೆ. ಸಂಸಾರದ ಜ್ಞಾನವು ಗುರುವಿಲ್ಲದೆ ಉಂಟಾಗುವುದಿಲ್ಲ ಮತ್ತು ಮೋಕ್ಷದ ಜ್ಞಾನವು ಜ್ಞಾನಿ ಪುರುಷರಿಲ್ಲದೆ ಉಂಟಾಗುವುದಿಲ್ಲ. ವ್ಯವಹಾರದ ಗುರು, ‘ವ್ಯವಹಾರ’ಕ್ಕಾಗಿ ಮತ್ತು ಜ್ಞಾನಿ ಪುರುಷರು ‘ನಿಶ್ಚಯ’ಕ್ಕಾಗಿ. ವ್ಯವಹಾರ ‘ರಿಲೇಟಿವ್’ ಆಗಿದೆ ಮತ್ತು ನಿಶ್ಚಯ ‘ರಿಯಲ್’ ಆಗಿದೆ. ‘ರಿಲೇಟಿವ್’ಗೆ ಗುರು ಬೇಕಾಗುತ್ತಾರೆ ಹಾಗು ‘ರಿಯಲ್’ಗಾಗಿ ಜ್ಞಾನಿ ಪುರುಷರು ಬೇಕಾಗುತ್ತಾರೆ.

**ಪ್ರಶ್ನಕರ್ತ:** ಗುರುವಿಲ್ಲದೆ ಜ್ಞಾನ ಹೇಗೆ ದೊರೆಯಲು ಸಾಧ್ಯ ಎಂದು ಕೂಡ ಹೇಳಲಾಗುತ್ತದೆ?

**ದಾದಾಶ್ರೀ:** ಗುರು ದಾರಿಯನ್ನು ತೋರಿಸುತ್ತಾರೆ, ಮಾರ್ಗವನ್ನು ತೋರಿಸುತ್ತಾರೆ ಮತ್ತು ‘ಜ್ಞಾನಿ ಪುರುಷ’ ಜ್ಞಾನವನ್ನು ನೀಡುತ್ತಾರೆ. ‘ಜ್ಞಾನಿ ಪುರುಷ’ ಎಂದರೆ ಯಾರಿಗೆ ಇನ್ನು ಅರಿಯಬೇಕಾದ್ದು ಏನೂ ಉಳಿದಿಲ್ಲವೋ, ಯಾರು ತನ್ನ ತದ್‌ಸ್ವರೂಪದಲ್ಲಿ ಕುಳಿತಿದ್ದಾರೋ, ಅವರು. ಅರ್ಥಾತ್, ‘ಜ್ಞಾನಿ ಪುರುಷರು’ ನಿಮಗೆ ಎಲ್ಲವನ್ನೂ ಧಾರೆಯೆರೆದುಬಿಡುತ್ತಾರೆ ಮತ್ತು ಗುರುವಾದವರು ನಿಮಗೆ ಸಂಸಾರದಲ್ಲಿ ದಾರಿಯನ್ನು ತೋರಿಸುತ್ತಾರೆ, ಅವರು ಹೇಳಿದ್ದನ್ನು ಅನುಸರಿಸಿದರೆ ಸಂಸಾರದಲ್ಲಿ ಜನರು ಸುಖಿಗಳಾಗುತ್ತಾರೆ. ಯಾರು ಆಧಿ, ವ್ಯಾಧಿ ಮತ್ತು ಉಪಾಧಿಯಲ್ಲಿ ಸಮಾಧಿ ಸ್ಥಿತಿಯನ್ನು ದಯಪಾಲಿಸುತ್ತಾರೋ ಅವರೇ ‘ಜ್ಞಾನಿ ಪುರುಷರು’.

**ಪ್ರಶ್ನಕರ್ತ:** ಜ್ಞಾನವು ಗುರುವಿನಿಂದ ದೊರೆಯುತ್ತದೆ, ಹೀಗಾಗಿ ಯಾವ ಗುರು ಸ್ವಯಂ ಆತ್ಮಸಾಕ್ಷಾತ್ಕಾರ ಮಾಡಿಕೊಂಡಿದ್ದಾರೋ ಅಂತಹ ಗುರುವಿನ ಮೂಲಕ ಮಾತ್ರವೇ ಜ್ಞಾನ ದೊರೆಯುವುದು ಸಾಧ್ಯವಲ್ಲವೇ?

**ದಾದಾಶ್ರೀ:** ಅವರು 'ಜ್ಞಾನಿ ಪುರುಷ'ರಾಗಿರಬೇಕು ಆದರೆ, ಕೇವಲ ಆತ್ಮಸಾಕ್ಷಾತ್ಕಾರ ಮಾಡಿಸಿಬಿಟ್ಟರೆ ಏನೂ ಆಗಿಬಿಡುವುದಿಲ್ಲ. ಯಾವಾಗ 'ಜ್ಞಾನಿ ಪುರುಷ'ರು 'ಈ ಜಗತ್ತು ನಡೆಯುವ ರೀತಿ', 'ತಾನು ಯಾರು?', 'ಇವನು ಯಾರು?', ಇಂತಹ ಎಲ್ಲಾ ವಿಷಯಗಳನ್ನು ಸ್ಪಷ್ಟಪಡಿಸಿಬಿಡುತ್ತಾರೋ, ಆಗ ಕೆಲಸವಾದಂತೆ. ಇಲ್ಲದಿದ್ದರೆ, ಪುಸ್ತಕಗಳ ಹಿಂದೆಯೇ ಅಲೆದಾಡಬೇಕಾಗುತ್ತದೆ, ಆದರೆ ಪುಸ್ತಕಗಳು ಕೇವಲ 'ಹೆಲ್ಪರ್' ಆಗಿರುತ್ತವೆ. ಅವು ಸಾಧಾರಣ ಕಾರಣವಾಗಿವೆ, ಅಸಾಧಾರಣ ಕಾರಣ ಕರ್ತರು ಯಾರು? 'ಜ್ಞಾನಿ ಪುರುಷರು'!

## ಅರ್ಪಣ ವಿಧಿಯನ್ನು ಯಾರು ಮಾಡಿಸಲು ಸಾಧ್ಯವಿದೆ?

**ಪ್ರಶ್ನಕರ್ತ:** ಈ ಮೊದಲೇ ಗುರುವಿನ ಮುಂದೆ ಅರ್ಪಣ ವಿಧಿ ಮಾಡಿದ್ದು, ಪುನಃ ಇಲ್ಲಿ ಜ್ಞಾನ ತೆಗೆದುಕೊಳ್ಳುವ ಮುನ್ನ ಮಾಡಿಸುವಂತಹ ಅರ್ಪಣ ವಿಧಿಯನ್ನು ಮಾಡಿದರೆ, ಅಂತಹ ಅರ್ಪಣ ವಿಧಿಯು ಸರಿ ಎಂದು ಹೇಳಲಾಗದು, ಅಲ್ಲವೇ?

**ದಾದಾಶ್ರೀ:** ಅರ್ಪಣ ವಿಧಿಯನ್ನು ಗುರು ಮಾಡಿಸುವುದೇ ಇಲ್ಲ. ಇಲ್ಲಂತೂ ಏನೆಲ್ಲವನ್ನೂ ಅರ್ಪಣ ಮಾಡಬೇಕಾಗುತ್ತದೆ? ಆತ್ಮವನ್ನು ಹೊರತುಪಡಿಸಿ ಯಾರೂ ಸಂಪೂರ್ಣವಾಗಿ ಎಲ್ಲವನ್ನೂ ಅಷ್ಟು ಸುಲಭದಲ್ಲಿ ಅರ್ಪಣೆ ಮಾಡುವುದಿಲ್ಲ, ಅಲ್ಲವೇ? ಅರ್ಪಣೆ ಆಗುವುದೂ ಇಲ್ಲ, ಮತ್ತು ಯಾವುದೇ ಗುರು ಹಾಗೆ ಹೇಳುವುದೂ ಇಲ್ಲ. ಅವರು ನಿಮಗೆ ಕೇವಲ ಮಾರ್ಗ ತೋರಿಸುತ್ತಾರೆ, ಅವರು ಒಬ್ಬ ಗೈಡ್‌ನ ಹಾಗೆ ಕೆಲಸ ಮಾಡುತ್ತಾರೆ. ನಾವು ಗುರುವಲ್ಲ, ನಾವು ಜ್ಞಾನಿ ಪುರುಷರು ಮತ್ತು ಪಡೆಯಬೇಕಾಗಿರುವುದು ಭಗವಂತನ ದರ್ಶನವನ್ನು. ನನಗೆ ಅರ್ಪಣೆ ಮಾಡಬೇಕಾಗಿಲ್ಲ, ಭಗವಂತನಿಗೆ ಅರ್ಪಣೆ ಮಾಡಬೇಕು.

## ಆತ್ಮಾನುಭೂತಿ ಯಾವ ರೀತಿಯಲ್ಲಿ ಆಗುತ್ತದೆ?

**ಪ್ರಶ್ನಕರ್ತ:** 'ನಾನು ಆತ್ಮನಾಗಿದ್ದೇನೆ' ಎಂಬುದರ ಜ್ಞಾನ ಯಾವ ರೀತಿ ಆಗುತ್ತದೆ? ನಾವೇ ಖುದ್ದಾಗಿ ಇದರ ಅನುಭವವನ್ನು ಪಡೆಯುವುದು ಹೇಗೆ?

**ದಾದಾಶ್ರೀ:** ಈ ಅನುಭವವನ್ನು ಉಂಟು ಮಾಡಲೆಂದೇ 'ನಾವು' ಇಲ್ಲಿ ಕುಳಿತಿರುವುದು. ಇಲ್ಲಿ ನಾವು 'ಜ್ಞಾನ' ನೀಡಿದಾಗ, 'ಆತ್ಮ' ಮತ್ತು 'ಅನಾತ್ಮವನ್ನು' ಪ್ರತ್ಯೇಕಿಸಿಬಿಡುತ್ತೇವೆ, ನಂತರ ನೀವು ನಿಮ್ಮ ಮನೆಗೆ ಹಿಂದಿರುಗಬಹುದು.

ಜ್ಞಾನದ ಪ್ರಾಪ್ತಿ ತನ್ನಿಂದ ತಾನೇ ಆಗುವುದು ಸಾಧ್ಯವಿಲ್ಲ. ತನ್ನಿಂದ ತಾನೇ ಆಗುವಂತಿದ್ದರೆ ಈ ಸಾಧು ಸಂನ್ಯಾಸಿಗಳೆಲ್ಲಾ ಪ್ರಾಪ್ತಿ ಮಾಡಿಕೊಂಡು ಕುಳಿತಿರುತ್ತಿದ್ದರು. ಆದರೆ, ಈ ಕೆಲಸವಾಗುವುದು ಕೇವಲ ಜ್ಞಾನಿಪುರುಷರಿಂದಲೇ. ಜ್ಞಾನಿಪುರುಷರು ಅದಕ್ಕೊಂದು ನಿಮಿತ್ತವಾಗಿದ್ದಾರೆ.

ಉದಾಹರಣೆಗೆ, ಔಷಧಿಗಳ ವಿಚಾರದಲ್ಲಿ ಡಾಕ್ಟರ್ ಅವಶ್ಯಕತೆ ಇದೆಯೋ ಇಲ್ಲವೋ ಅಥವಾ ನೀವೇ ಮನೆಯಲ್ಲೇ ಔಷಧಿ ತಯಾರಿಸಿ ಕೊಂಡುಬಿಡುತ್ತೀರೋ? ಆ ವಿಷಯದಲ್ಲಿ ಏನಾದರೂ ತಪ್ಪಾದರೆ ಎಲ್ಲಿ ನಾವು ಸಾವನ್ನಪ್ಪುತ್ತೇವೋ ಎಂದು ಎಚ್ಚರವಾಗಿರುತ್ತೀರಿ ಅಲ್ಲವೇ? ಆದರೆ, ಆತ್ಮಕ್ಕೆ ಸಂಬಂಧಪಟ್ಟಂತೆ ಸ್ವಂತ ನೀವೇ ಮಿಕ್ಸ್‌ಚರ್ ಮಾಡಿಕೊಂಡು ಬಿಡುತ್ತೀರಿ! ಶಾಸ್ತ್ರವನ್ನು, ಗುರುವಿನಿಂದ ನೀಡಲ್ಪಟ್ಟ ಅರಿವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ನಿಮ್ಮದೇ ಬುದ್ಧಿಯಿಂದ ಓದಿ ಮಿಕ್ಸ್‌ಚರ್ ಮಾಡಿಕೊಂಡು ಕುಡಿದುಬಿಡುತ್ತೀರಿ. ಇದನ್ನು ಭಗವಾನ್ ಸ್ವಚ್ಛಂದ ಎಂದು ಕರೆದಿದ್ದಾರೆ. ಔಷಧಿಯ ವಿಚಾರದಲ್ಲಿ, ಕೇವಲ ಒಂದು ಜನ್ಮದ ಮರಣವಾದರೆ, ಈ ಸ್ವಚ್ಛಂದದಿಂದ ಅನಂತ ಜನ್ಮಗಳ ಮರಣವಾಗಿಬಿಡುತ್ತದೆ! ! !

## ಅಕ್ರಮ ಜ್ಞಾನದಿಂದ ತ್ವರಿತ ಮೋಕ್ಷ

ಈಗ ನಿಮ್ಮ ಮುಂದೆ 'ಜ್ಞಾನಿ ಪುರುಷರು' ಪ್ರತ್ಯಕ್ಷವಾಗಿದ್ದಾರೆ ಹೀಗಾಗಿ ಮಾರ್ಗವೂ ದೊರೆಯುತ್ತದೆ; ಇಲ್ಲದಿದ್ದರೆ, ಈಗಿನ ಜನರು ಬಹಳ ಆಲೋಚಿಸುತ್ತಾರೆ, ಆದರೆ ಮಾರ್ಗ ದೊರೆಯುವುದಿಲ್ಲ ಮತ್ತು ಬಂದ ದಾರಿಯಲ್ಲಿಯೇ ಹೊರಟುಹೋಗುತ್ತಾರೆ. 'ಜ್ಞಾನಿ ಪುರುಷರು' ಬಲು ಅಪರೂಪಕ್ಕೆ, ಎಲ್ಲೋ ಒಮ್ಮೆ ಪ್ರಕಟವಾಗುತ್ತಾರೆ ಹಾಗು ಅವರಿಂದ ಜ್ಞಾನ ಪಡೆಯುವುದರಿಂದ ಆತ್ಮಾನುಭವ ಉಂಟಾಗುತ್ತದೆ. ಹಾಗಿದ್ದಾಗ, ಮೋಕ್ಷವು ಕೂಡಾ ತ್ವರಿತ ರೂಪದಲ್ಲಿರಬೇಕು. ಇಲ್ಲೇ, ದೇಹಸಹಿತವಾಗಿ ಮೋಕ್ಷವನ್ನು ಅನುಭವಿಸಬೇಕು. ಈ ಅಕ್ರಮ ಜ್ಞಾನದಿಂದ ತ್ವರಿತ ಮೋಕ್ಷ ದೊರೆಯುತ್ತದೆ ಮತ್ತು ಅನುಭವವೂ ಆಗುತ್ತದೆ.

## ಆತ್ಮ-ಅನಾತ್ಮದ ಭೇದ ತಿಳಿಯುವಂತೆ ಜ್ಞಾನಿಯಿಂದಲೇ ಮಾಡಲು ಸಾಧ್ಯ

ಈ ಉಂಗುರದಲ್ಲಿ ಚಿನ್ನ ಮತ್ತು ತಾಮ್ರ ಎರಡೂ ಸೇರಿದ್ದು, ಇದನ್ನು ನಾವು ಪೇಟೆಗೆ ತೆಗೆದುಕೊಂಡು ಹೋಗಿ, ಯಾರಿಗಾದರೂ 'ಅಣ್ಣಾ, ಇವೆರಡನ್ನು ಬೇರೆ-ಬೇರೆ ಮಾಡಿ' ಎಂದು ಹೇಳಿದರೆ, ಯಾರು ಬೇಕಾದರೂ ಮಾಡಿಬಿಡುತ್ತಾರೆಯೇ? ಯಾರಿಗೆ ಮಾಡಲು ಸಾಧ್ಯವಿದೆ?

**ಪ್ರಶ್ನಕರ್ತ:** ಅಕ್ಕಸಾಲಿಗನಿಗೆ ಮಾತ್ರ ಮಾಡಲು ಸಾಧ್ಯ.

**ದಾದಾಶ್ರೀ:** ಇದು ಯಾರ ಕೆಲಸವೋ ಆತ, ಯಾರು ಇದರಲ್ಲಿ ಎಕ್ಸ್‌ಪರ್ಟ್ ಆಗಿದ್ದಾನೋ ಆತ, ಚಿನ್ನ ಮತ್ತು ತಾಮ್ರವನ್ನು ಬೇರೆ–ಬೇರೆ ಮಾಡುತ್ತಾನೆ. ನೂರು ಟಚ್ (ಶೇಕಡಾ) ಚಿನ್ನವನ್ನು ಬೇರೆ ಮಾಡುತ್ತಾನೆ, ಏಕೆಂದರೆ ಚಿನ್ನದ ಗುಣಧರ್ಮಗಳು ಇವಾಗಿವೆ ಮತ್ತು ತಾಮ್ರದ ಗುಣಧರ್ಮಗಳು ಈ ರೀತಿಯವು ಎಂದು, ಆತನಿಗೆ ಎರಡರ ಗುಣಧರ್ಮಗಳೂ ತಿಳಿದಿವೆ. ಅದೇ ರೀತಿ ಜ್ಞಾನಿ ಪುರುಷರು ಆತ್ಮದ ಗುಣಧರ್ಮಗಳನ್ನು ತಿಳಿದಿರುತ್ತಾರೆ ಮತ್ತು ಅನಾತ್ಮದ ಗುಣಧರ್ಮಗಳನ್ನೂ ತಿಳಿದಿರುತ್ತಾರೆ.

ಉಂಗುರದಲ್ಲಿ ಚಿನ್ನ ಮತ್ತು ತಾಮ್ರದ 'ಮಿಕ್ಸ್‌ಚರ್' ಇದ್ದರೆ, ಅದನ್ನು ಪ್ರತ್ಯೇಕಪಡಿಸಬಹುದು, ಆದರೆ ಅವು ಕಂಪೌಂಡ್ ರೂಪದಲ್ಲಿ ಇದ್ದಿದ್ದರೆ ಪ್ರತ್ಯೇಕಗೊಳಿಸುವುದು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ, ಇದರಿಂದ ಗುಣಧರ್ಮಗಳು ಬೇರೆಯ ರೀತಿಯವೇ ಆಗಿಬಿಟ್ಟಿರುತ್ತಿದ್ದವು. ಹಾಗೆಯೇ, ಇಲ್ಲಿ ಕೂಡಾ ಪ್ರತಿಯೊಂದು ಜೀವಿಯ ಒಳಗೆ ಚೇತನ ಮತ್ತು ಅಚೇತನ ಮಿಕ್ಸ್‌ಚರ್ ರೂಪದಲ್ಲಿ ಇರುವುವು, ಅವು ಕಂಪೌಂಡ್ ರೂಪದಲ್ಲಿಲ್ಲ. ಆದ್ದರಿಂದ ಪುನಃ ತಮ್ಮ ಸ್ವಭಾವವನ್ನು ಪಡೆದುಕೊಳ್ಳಬಲ್ಲವು. ಕಂಪೌಂಡ್ ಆಗಿದ್ದೇ ಆದರೆ, ತಿಳಿಯುತ್ತಲೇ ಇರಲಿಲ್ಲ. ಚೇತನದ ಗುಣಧರ್ಮಗಳೂ ಕೂಡ ತಿಳಿಯುತ್ತಿರಲಿಲ್ಲ, ಆಚೇತನದ ಗುಣಧರ್ಮಗಳೂ ತಿಳಿಯುತ್ತಿರಲಿಲ್ಲ ಮತ್ತು ಮೂರನೆಯದೇ ಒಂದು ಗುಣಧರ್ಮ ಉತ್ಪನ್ನವಾಗುತ್ತಿತ್ತು. ಆದರೆ ಹಾಗಾಗಿಲ್ಲ. ಕೇವಲ ಮಿಕ್ಸ್‌ಚರ್ ಆಗಿಬಿಟ್ಟಿದೆಯಷ್ಟೇ.

## ಜ್ಞಾನಿಪುರುಷರು, ವರ್ಲ್ಡ್‌ನ ಗ್ರೇಟೆಸ್ಟ್ ಸೈಂಟಿಸ್ಟ್

ವರ್ಲ್ಡ್‌ನ ಗ್ರೇಟೆಸ್ಟ್ ಸೈಂಟಿಸ್ಟ್, 'ಜ್ಞಾನಿಪುರುಷರೇ' ಆಗಿದ್ದಾರೆ, ಅವರು ಮಾತ್ರ ತಿಳಿಯಬಲ್ಲರು ಮತ್ತು ಅವರು ಮಾತ್ರ ಎರಡನ್ನೂ ಪ್ರತ್ಯೇಕಗೊಳಿಸಬಲ್ಲರು. ಅವರು ಆತ್ಮ ಮತ್ತು ಅನಾತ್ಮವನ್ನು ಬೇರೆಬೇರೆ ಮಾಡುವುದಷ್ಟೇ ಅಲ್ಲದೆ, ನಿಮ್ಮ ಪಾಪಗಳನ್ನು ಭಸ್ಮ ಮಾಡಿಬಿಡುತ್ತಾರೆ, ಅಲ್ಲದೆ ದಿವ್ಯಚಕ್ಷುಗಳನ್ನು ನೀಡುತ್ತಾರೆ ಮತ್ತು 'ಈ ಜಗತ್ತೆಂದರೆ ಏನು? ಯಾವ ರೀತಿ ನಡೆಯುತ್ತಿದೆ? ಯಾರು ನಡೆಸುತ್ತಿದ್ದಾರೆ?' ಮುಂತಾದ ಎಲ್ಲವನ್ನೂ ಸ್ಪಷ್ಟ ಮಾಡುತ್ತಾರೆ, ಆಗ ನಿಮ್ಮ ಕೆಲಸ ಪೂರ್ಣವಾಗುತ್ತದೆ.

ಕೋಟ್ಯಂತರ ಜನ್ಮಗಳ ಪುಣ್ಯ ಜಾಗೃತವಾದಾಗಲೇ 'ಜ್ಞಾನಿಯ' ದರ್ಶನವಾಗುವುದು, ಇಲ್ಲದಿದ್ದರೆ ದರ್ಶನವಾದರೂ ಎಲ್ಲಿಂದ ಆಗುತ್ತದೆ? ಜ್ಞಾನದ ಪ್ರಾಪ್ತಿಯಾಗಬೇಕೆಂದರೆ ಜ್ಞಾನಿಯನ್ನು ಗುರುತಿಸು! ಬೇರೆ ಯಾವುದೇ ದಾರಿ ಇಲ್ಲ. ಹುಡುಕುವವರಿಗೆ ಸಿಕ್ಕೇ ಸಿಗುತ್ತಾರೆ!

# 6. 'ಜ್ಞಾನಿ ಪುರುಷ ಯಾರು?'

## ಸಂತರು ಮತ್ತು ಜ್ಞಾನಿಗಳ ಪರಿಭಾಷೆ

**ಪ್ರಶ್ನಕರ್ತ:** ಇದುವರೆಗೆ ಆಗಿಹೋದ ಸಂತರು ಮತ್ತು ಜ್ಞಾನಿಗಳ ಪೈಕಿ ಎಷ್ಟು ಅಂತರವಿದೆ?

**ದಾದಾಶ್ರೀ:** ಯಾರು ದುರ್ಬಲತೆಗಳನ್ನು ಬಿಡಿಸುತ್ತಾರೋ ಮತ್ತು ಒಳ್ಳೆಯ ವಿಚಾರಗಳನ್ನು ಕಲಿಸುತ್ತಾರೋ, ಯಾರು ತಪ್ಪು ಕೆಲಸಗಳನ್ನು ಬಿಡುವಂತೆ ಮಾಡುತ್ತಾರೋ, ಮತ್ತು ಒಳ್ಳೆಯದನ್ನು ಹಿಡಿಯುವಂತೆ ಮಾಡುತ್ತಾರೋ, ಅವರನ್ನು ಸಂತರು ಎಂದು ಕರೆಯಲಾಗುತ್ತದೆ. ಯಾರು ಪಾಪ ಕರ್ಮಗಳಿಂದ ನಮ್ಮನ್ನು ರಕ್ಷಿಸುತ್ತಾರೋ ಅವರು ಸಂತರು. ಆದರೆ ಯಾರು ಪಾಪ ಮತ್ತು ಪುಣ್ಯ ಎರಡರಿಂದಲೂ ನಮ್ಮನ್ನು ಕಾಪಾಡುತ್ತಾರೋ, ಅವರನ್ನು ಜ್ಞಾನಿ ಪುರುಷರು ಎಂದು ಹೇಳಲಾಗುತ್ತದೆ. ಸಂತರು ಸರಿಯಾದ ಮಾರ್ಗದಲ್ಲಿ ಕರೆದೊಯ್ಯುತ್ತಾರೆ ಮತ್ತು ಜ್ಞಾನಿ ಪುರುಷರು ಮುಕ್ತಿ ದೊರಕಿಸಿ ಕೊಡುತ್ತಾರೆ. ಜ್ಞಾನಿ ಪುರುಷರನ್ನು ಅಂತಿಮ ಲಕ್ಷ್ಯ ಎಂದು ಹೇಳಲಾಗುತ್ತದೆ, ಅವರಿಂದ ನಿಮ್ಮ ಕೆಲಸ ಆಗಿಯೇ ಆಗುತ್ತದೆ. ನಿಜವಾದ ಜ್ಞಾನಿ ಯಾರು? ಯಾರಲ್ಲಿ ಅಹಂಕಾರ ಮತ್ತು ಮಮತೆ ಎರಡೂ ಇಲ್ಲವೋ ಅವರು.

ಯಾರಿಗೆ ಆತ್ಮದ ಸಂಪೂರ್ಣ ಅನುಭವ ಆಗಿದೆಯೋ ಅವರನ್ನು ಜ್ಞಾನಿ ಪುರುಷರು ಎಂದು ಕರೆಯಲಾಗುತ್ತದೆ. ಅವರು ಸಂಪೂರ್ಣ ಬ್ರಹ್ಮಾಂಡದ ವರ್ಣನೆಯನ್ನು ಮಾಡಬಲ್ಲರು. ಎಲ್ಲಾ ಪ್ರಶ್ನೆಗಳಿಗೂ ಉತ್ತರ ನೀಡಬಲ್ಲರು. ಜ್ಞಾನಿ ಪುರುಷರು ಜಗತ್ತಿನ ಆಶ್ಚರ್ಯವೆಂದೇ ಹೇಳಬಹುದು. ಜ್ಞಾನಿ ಪುರುಷ ಎಂದರೆ ಪ್ರಕಟಗೊಂಡ ದೀಪ.

## ಜ್ಞಾನಿ ಪುರುಷರ ಲಕ್ಷಣಗಳು

**ಪ್ರಶ್ನಕರ್ತ:** ಜ್ಞಾನಿ ಪುರುಷರನ್ನು ಗುರುತಿಸುವುದು ಹೇಗೆ?

**ದಾದಾಶ್ರೀ:** ಏನನ್ನೂ ಹೇಳದೆಯೇ ಜ್ಞಾನಿ ಪುರುಷರನ್ನು ಗುರುತಿಸಬಹುದು, ಹಾಗಿರುತ್ತಾರೆ ಜ್ಞಾನಿಪುರುಷರು. ಅವರ ಸುಗಂಧವೇ ಗುರುತಿಸುವಂಥದ್ದಾಗಿರುತ್ತದೆ. ಅವರ ಸುತ್ತಮುತ್ತಲ ಪರಿಸರ ಬೇರೆಯೇ ಆಗಿರುತ್ತದೆ! ಅವರ ವಾಣಿ ಬೇರೆ ಬಗೆಯದೇ ಆಗಿರುತ್ತದೆ! ಅವರ ಮಾತುಗಳಿಂದಲೇ ತಿಳಿದುಬಿಡುತ್ತದೆ. ಅವರ ಕಣ್ಣುಗಳನ್ನು ನೋಡುತ್ತಲೇ ತಿಳಿದುಬಿಡುತ್ತದೆ. ಜ್ಞಾನಿಯ ಬಳಿ ಅಂತಹ ಹಲವು ಪುರಾವೆಗಳು ಇರುತ್ತವೆ. ಅವರ ಪ್ರತಿಯೊಂದು ಶಬ್ದವನ್ನು, ಅರ್ಥ ಮಾಡಿಕೊಂಡರೆ, ಅವೆಲ್ಲವೂ ಶಾಸ್ತ್ರರೂಪವಾಗಿರುತ್ತವೆ, ಅವರ ವಾಣಿ–ವರ್ತನೆ ಮತ್ತು

ನಮ್ರತೆ ಮನೋಹರವಾಗಿರುತ್ತದೆ, ಮನಸ್ಸನ್ನು ಅಪಹರಿಸುವಂಥದ್ದಾಗಿರುತ್ತದೆ. ಇಂತಹ ಬಹಳಷ್ಟು ಲಕ್ಷಣಗಳಿರುತ್ತವೆ.

ಜ್ಞಾನಿಪುರುಷರು **ಅಬುದ್ಧರಾಗಿರುತ್ತಾರೆ**. ಅಂದರೆ ಅವರು ಬುದ್ಧಿಯ ಆಧಾರವನ್ನು ಹೆಚ್ಚು ಹೊಂದಿರುವುದಿಲ್ಲ. ಯಾರು ಆತ್ಮವನ್ನು ತಿಳಿದಿರುತ್ತಾರೋ ಅವರಂತೂ ಪರಮಸುಖಿಗಳಾಗಿರುತ್ತಾರೆ ಮತ್ತು ಅವರಿಗೆ ಕಿಂಚಿತ್ತೂ ದುಃಖವಿರುವುದಿಲ್ಲ. ಹಾಗಾಗಿ, ಅಲ್ಲಿ ನಮ್ಮ ಕಲ್ಯಾಣವಾಗುತ್ತದೆ. ಯಾರು ತನ್ನ ಕಲ್ಯಾಣವನ್ನು ಮಾಡಿಕೊಂಡಿದ್ದಾರೋ, ಅವರು ಮಾತ್ರವೇ ನಮ್ಮ ಕಲ್ಯಾಣವನ್ನು ಮಾಡಬಲ್ಲರು. ಖುದ್ದಾಗಿ ಯಾರು ಈಜಬಲ್ಲರೋ ಅವರು ಮಾತ್ರವೇ ನಮ್ಮನ್ನು ಈಜುವಂತೆ ಮಾಡಿ ದಡ ಮುಟ್ಟಿಸಬಲ್ಲರು. ಅಲ್ಲಿ, ಲಕ್ಷಾಂತರ ಜನರು ಈಜಿ ಪಾರಾಗುತ್ತಾರೆ.

ಶ್ರೀಮಾನ್ ರಾಜಚಂದ್ರಜೀ ಹೇಳಿದ್ದಾರೆ, 'ಯಾರಿಗೆ ಕಿಂಚಿತ್ತೂ ಯಾವುದೇ ರೀತಿಯ ಸ್ಪೃಹೆ ಅಥವಾ ಆಸೆ ಇಲ್ಲವೋ, ಯಾರಿಗೆ ಈ ಪ್ರಪಂಚದ ಯಾವುದೇ ಪ್ರಕಾರದ ಹಸಿವೆಯೂ ಇಲ್ಲವೋ, ಉಪದೇಶ ನೀಡಬೇಕೆಂಬ ಬಯಕೆಯೂ ಇಲ್ಲವೋ, ಶಿಷ್ಯರ ಅಪೇಕ್ಷೆಯೂ ಇಲ್ಲವೋ, ಯಾರನ್ನಾದರೂ ಸುಧಾರಿಸಬೇಕೆಂಬ ಹಂಬಲವೂ ಇಲ್ಲವೋ, ಯಾವುದೇ ರೀತಿಯ ಗರ್ವವೂ ಇಲ್ಲವೋ, ಸ್ವಾಮಿತ್ವದ ಭಾವವೂ ಇಲ್ಲವೋ, ಅವರೇ ಜ್ಞಾನಿ ಪುರುಷರು'.

## 7. ಜ್ಞಾನಿ ಪುರುಷ – ಎ. ಎಮ್. ಪಟೇಲ್ (ದಾದಾಶ್ರೀ)

'ದಾದಾ ಭಗವಾನ್', ಹದಿನಾಲ್ಕು ಲೋಕಗಳ ನಾಥರಾಗಿರುವ ಇವರು, ನಿಮ್ಮಲ್ಲೂ ಇದ್ದಾರೆ, ಆದರೆ ನಿಮ್ಮಲ್ಲಿ ಪ್ರಕಟಗೊಂಡಿಲ್ಲ. ನಿಮ್ಮಲ್ಲಿ ಅವ್ಯಕ್ತರೂಪದಲ್ಲಿದ್ದಾರೆ ಮತ್ತು ನನ್ನಲ್ಲಿ ವ್ಯಕ್ತಗೊಂಡಿದ್ದಾರೆ. ಯಾರಲ್ಲಿ ವ್ಯಕ್ತಗೊಂಡಿದ್ದಾರೋ ಅವರು ಫಲ ನೀಡುತ್ತಾರೆ. ಒಂದು ಬಾರಿ ಅವರ ಹೆಸರು ಹೇಳಿದರೂ, ಕೆಲಸವಾದಂತೆಯೇ. ಆದರೆ, ಅರ್ಥ ಮಾಡಿಕೊಂಡು ಹೇಳಿದರೆ ಕಲ್ಯಾಣವಾಗುತ್ತದೆ ಮತ್ತು ಸಾಂಸಾರಿಕ ವಸ್ತುಗಳ ಅಡಚಣೆ ಏನಾದರೂ ಇದ್ದರೆ ಅವೂ ದೂರಾಗಿಬಿಡುತ್ತವೆ.

ಇಲ್ಲಿ ಯಾರು ಕಂಡುಬರುತ್ತಿದ್ದಾರೋ ಅವರು 'ದಾದಾ ಭಗವಾನ್' ಅಲ್ಲ. ನೀವು ನಿಮಗೆ ಯಾರು ಕಂಡುಬರುತ್ತಾರೋ ಅವರನ್ನೇ 'ದಾದಾ ಭಗವಾನ್' ಎಂದು ತಿಳಿಯುತ್ತಿರಬಹುದು ಅಲ್ಲವೇ? ಆದರೆ ಇಲ್ಲಿ ಕಂಡುಬರುತ್ತಿರುವವರು ಭಾದರಣದ ಪಟೇಲ್. ನಾನು 'ಜ್ಞಾನಿ ಪುರುಷ'ನಾಗಿದ್ದೇನೆ ಮತ್ತು ಒಳಗೆ ಯಾರು ಪ್ರಕಟರಾಗಿದ್ದಾರೋ ಅವರು ದಾದಾ ಭಗವಾನ್ ಆಗಿದ್ದಾರೆ. ನಾನು ಸ್ವಯಂ ಭಗವಾನ್ ಅಲ್ಲ. ನನ್ನೊಳಗೆ ಪ್ರಕಟರಾಗಿರುವ

ದಾದಾ ಭಗವಾನರಿಗೆ, ನಾನೂ ನಮಸ್ಕಾರ ಮಾಡುತ್ತೇನೆ. ದಾದಾ ಭಗವಾನ್‌ರೊಂದಿಗೆ ನಮ್ಮದು ಕೂಡ ಭಗವದ್ಭಕ್ತನ ವ್ಯವಹಾರವಾಗಿದೆ. ಆದರೆ ಜನರು, ಇವರೇ ಸ್ವತಃ ದಾದಾ ಭಗವಾನ್ ಆಗಿದ್ದಾರೆ ಎಂದು ತಿಳಿಯುತ್ತಾರೆ. ಇಲ್ಲ, ಇವರು ದಾದಾ ಭಗವಾನ್ ಆಗಲು ಹೇಗೆ ಸಾಧ್ಯ? ಇವರು ಭಾದರಣದ ಪಟೇಲ್.

ಈ ಜ್ಞಾನ ತೆಗೆದುಕೊಂಡ ನಂತರ, ದಾದಾಜೀರವರ ಆಜ್ಞೆಯ ಪಾಲನೆ ಮಾಡುವುದು ಎಂದರೆ 'ಎ. ಎಮ್. ಪಟೇಲ್'ರವರ ಆಜ್ಞೆ ಪಾಲನೆ ಮಾಡುವುದು ಎಂದಲ್ಲ. ಹದಿನಾಲ್ಕು ಲೋಕಗಳ ನಾಥರಾದ, ಸ್ವಯಂ 'ದಾದಾ ಭಗವಾನ್'ರವರ ಆಜ್ಞೆಯಾಗಿದೆ. ಅದರ ಗ್ಯಾರಂಟಿ ನೀಡುತ್ತೇನೆ. ಈ ಮಾತುಗಳೆಲ್ಲವೂ ನನ್ನ ಮಾಧ್ಯಮದ ಮೂಲಕ ಹೊರಬಂದಿವೆ. ಆದ್ದರಿಂದ ನೀವು ಆ ಆಜ್ಞೆಯನ್ನು ಪಾಲಿಸಬೇಕು. ಇದು 'ನನ್ನ ಆಜ್ಞೆಯಲ್ಲ', ಇದು ದಾದಾ ಭಗವಾನ್‌ರವರ ಆಜ್ಞೆಯಾಗಿದೆ. ನಾನೂ ಕೂಡ ಆ ಭಗವಾನ್‌ರವರ ಆಜ್ಞೆಯಂತೆ ಇರುತ್ತೇನಲ್ಲವೇ!

## 8. ಕ್ರಮ ಮಾರ್ಗ – ಅಕ್ರಮ ಮಾರ್ಗ

ಮೋಕ್ಷ ಸಾಧನೆಗಾಗಿ ಎರಡು ಮಾರ್ಗಗಳಿವೆ: ಒಂದು 'ಕ್ರಮ' ಮಾರ್ಗ ಮತ್ತು ಎರಡನೆಯದು 'ಅಕ್ರಮ' ಮಾರ್ಗ. ಕ್ರಮ ಎಂದರೆ ಒಂದು ಮೆಟ್ಟಿಲ ನಂತರ ಮತ್ತೊಂದು ಮೆಟ್ಟಿಲನ್ನು ಹತ್ತುವುದು. ಕ್ರಮ ಮಾರ್ಗದಲ್ಲಿ ನೀವು ಪರಿಗ್ರಹ (ಲೌಕಿಕ ಸವಲತ್ತು) ಕಡಿಮೆ ಮಾಡಿದಂತೆಲ್ಲಾ ನಿಮ್ಮನ್ನು ಅವರು ಮೋಕ್ಷದೆಡೆ ಒಯ್ಯುತ್ತಾರೆ, ಅದೂ ಬಹಳ ಸಮಯದ ನಂತರ. ಹಾಗಿದ್ದರೆ ಅಕ್ರಮ ವಿಜ್ಞಾನವೆಂದರೇನು? ಮೆಟ್ಟಿಲುಗಳನ್ನು ಹತ್ತಬೇಕಾಗಿಲ್ಲ, ಲಿಫ್ಟ್‌ನಲ್ಲಿ ಕುಳಿತುಕೊಂಡಿರಬೇಕು ಅಷ್ಟೇ, ಅದರಿಂದ ಹನ್ನೆರಡನೆ ಅಂತಸ್ತನ್ನು ತಲುಪಬಹುದು. ಇದು ಇಂತಹ ಲಿಫ್ಟ್ ಮಾರ್ಗವಾಗಿದೆ. ನೇರವಾಗಿ ಲಿಫ್ಟ್‌ನಲ್ಲಿ ಕುಳಿತುಕೊಂಡು, ಹೆಂಡತಿ–ಮಕ್ಕಳ ಜೊತೆಯಲ್ಲಿದ್ದು, ಮಗನ–ಮಗಳ ಮದುವೆ ಮಾಡಿ, ಎಲ್ಲಾ ಕರ್ತವ್ಯಗಳನ್ನೂ ಮಾಡಿಯೂ, ಮೋಕ್ಷವನ್ನು ಸಾಧಿಸಬಹುದು. ಇದೆಲ್ಲವನ್ನೂ ಮಾಡಿದ್ದಾಗ್ಯೂ, ನಿಮ್ಮ ಮೋಕ್ಷ ಇಲ್ಲದಾಗದು. ಇಂತಹ ಅಕ್ರಮ ಮಾರ್ಗವನ್ನು ಅಪವಾದದ (ಅಸಾಧಾರಣ) ಮಾರ್ಗವೆಂದೂ ಕರೆಯಲಾಗುತ್ತದೆ. ಅದು ಪ್ರತಿ ಹತ್ತು ಲಕ್ಷ ವರ್ಷಗಳಿಗೊಮ್ಮೆ ಪ್ರಕಟವಾಗುತ್ತದೆ. ಯಾರು ಈ ಲಿಫ್ಟ್ ಮಾರ್ಗದಲ್ಲಿ ಕುಳಿತುಕೊಳ್ಳುತ್ತಾರೋ, ಅವರ ಕಲ್ಯಾಣವಾಗಿಬಿಡುತ್ತದೆ. ನಾನು ಕೇವಲ ಒಂದು ನಿಮಿತ್ತ. ಯಾರು ಈ ಲಿಫ್ಟ್‌ನಲ್ಲಿ ಕುಳಿತುಕೊಳ್ಳುತ್ತಾರೋ, ಅವರಿಗೆ ಪರಿಹಾರ ದೊರೆತಂತೆಯೇ ಅಲ್ಲವೇ! ಪರಿಹಾರ ದೊರೆಯಲೇ ಬೇಕಲ್ಲವೇ? ನಾವು ಮೋಕ್ಷವನ್ನು ಸಾಧಿಸಲು ಹೊರಟಿದ್ದೇವೆ, ಆ ಲಿಫ್ಟ್‌ನಲ್ಲಿ ಕುಳಿತಿದ್ದೇವೆ, ಎಂಬುದಕ್ಕೆ ರುಜುವಾತು ಬೇಕೋ ಅಥವಾ ಬೇಡವೋ? ಅದಕ್ಕೆ ರುಜುವಾತು ಏನೆಂದರೆ ಕೋಪ–ಅಹಂಕಾರ–ಮಾಯೆ–

ಲೋಭಗಳು ಇಲ್ಲದಿರುವಿಕೆ, ಆರ್ತಧ್ಯಾನ–ರೌದ್ರಧ್ಯಾನ ಇಲ್ಲದಿರುವಿಕೆ. ಆಗ ಕೆಲಸ ಪೂರ್ಣವಾಗಿ ಆದಂತೆಯೇ ಅಲ್ಲವೇ?

## ಅಕ್ರಮ ಮಾರ್ಗ ಆತ್ಮಾನುಭೂತಿಯನ್ನು ಸರಳತೆಯಿಂದ ಮಾಡಿಸುತ್ತದೆ

ಕ್ರಮ ಮಾರ್ಗದಲ್ಲಂತೂ ಬಹಳ ಹೆಚ್ಚಿನ ಪ್ರಯತ್ನದ ನಂತರವಷ್ಟೇ ಆತ್ಮವಿದೆ ಎಂಬುದು ಗಮನಕ್ಕೆ ಬರುತ್ತದೆ, ಅದೂ ಬಹಳ ಅಸ್ಪಷ್ಟವಾಗಿ ಮತ್ತು ಲಕ್ಷ್ಯವೂ ಸ್ಥಿರವಾಗಿರುವುದಿಲ್ಲ. ಆತ್ಮವೆಂಬುದು ಹೀಗಿರುತ್ತದೆ ಎಂದು, ಅದನ್ನು ಲಕ್ಷ್ಯದಲ್ಲಿರಿಸಿಕೊಳ್ಳಬೇಕಾಗುತ್ತದೆ. ಆದರೆ ಅಕ್ರಮ ಮಾರ್ಗದಲ್ಲಿ ನಿಮಗೆ ನೇರವಾಗಿ ಆತ್ಮಾನುಭವವೇ ಆಗಿಬಿಡುತ್ತದೆ. ತಲೆನೋವು ಉಂಟಾಗಬಹುದು, ಹಸಿವು ಆಗಬಹುದು, ಹೊರಗೆ ಎಷ್ಟೇ ಕಷ್ಟಗಳು ಬಂದರೂ ಒಳಗಿನ ಶಾಂತಿ ಕದಡುವುದಿಲ್ಲ. ಆತ್ಮಾನುಭವವೆನ್ನುವುದು ಇದನ್ನೇ. ಆತ್ಮಾನುಭವವಂತೂ ದುಃಖವನ್ನೂ ಸುಖವನ್ನಾಗಿ ಬದಲಿಸಿಬಿಡುತ್ತದೆ. ಆದರೆ, ಮಿಥ್ಯೆಯನ್ನೇ ಸತ್ಯವೆಂದು ನಂಬಿದವರಿಗೆ ಸುಖದಲ್ಲೂ ದುಃಖದ ಅನುಭವವಾಗುತ್ತದೆ.

ಈ ಅಕ್ರಮ ವಿಜ್ಞಾನದಿಂದ ನಿಮಗೆ ಬಹಳ ಬೇಗ ಆತ್ಮಾನುಭೂತಿಯಾಗುತ್ತದೆ. ಇದಂತೂ ಬಹಳ ಉನ್ನತ ಮಟ್ಟದ ಒಂದು ವಿಜ್ಞಾನವಾಗಿದೆ. ಆತ್ಮ ಮತ್ತು ಅನಾತ್ಮಗಳ ನಡುವೆ, ಅಂದರೆ ನಿಮ್ಮ ಮತ್ತು ಬೇರೆ ವಸ್ತುಗಳ ನಡುವೆ ವಿಭಜನೆಯನ್ನು ಉಂಟು ಮಾಡಿ, ಇದು ನಿಮ್ಮದು ಮತ್ತು ಇದು ನಿಮ್ಮದಲ್ಲ ಎಂದು ತಿಳಿಸಿ, ಇಬ್ಬರ ನಡುವೆಯೂ ವಿದಿನ್ ವನ್ ಅವರ್ (ಕೇವಲ ಒಂದು ಗಂಟೆಯೊಳಗೆ) ಲೈನ್ ಆಫ್ ಡಿಮಾರ್ಕೇಶನ್ (ಭೇದರೇಖೆ) ಅನ್ನು ಹಾಕಿಬಿಡುತ್ತೇನೆ. ನೀವು ಸ್ವಂತವಾಗಿ ಕಷ್ಟಪಟ್ಟು ಇದನ್ನು ಮಾಡಲು ಹೋದರೆ ಲಕ್ಷಾಂತರ ಜನ್ಮಗಳಲ್ಲೂ ಕೆಲಸ ಆಗುವುದಿಲ್ಲ.

## 'ನನಗೆ' ಯಾರು ಸಿಗುತ್ತಾರೋ, ಅವರೇ ಅಧಿಕಾರಿಗಳು

**ಪ್ರಶ್ನಕರ್ತ:** ಈ ಮಾರ್ಗ ಎಷ್ಟೊಂದು ಸುಲಭವಾಗಿದೆ. ಹಾಗಿದ್ದರೆ, ಅಧಿಕಾರವೆಂಬುದನ್ನು (ಅರ್ಹತೆ) ನೋಡುವುದು ಬೇಡವೇ? ಇದು ಯಾರಿಗೆ ಬೇಕಾದರೂ ಸಾಧ್ಯವೇ?

**ದಾದಾಶ್ರೀ:** ಜನ ನನ್ನಲ್ಲಿ ಕೇಳುತ್ತಾರೆ, 'ನಾನು ಅಧಿಕಾರಿಯೇ (ಅರ್ಹನೇ)?' ಎಂದು. ಆಗ ನಾನು ಹೇಳುತ್ತೇನೆ, 'ನೀನು ನನಗೆ ಸಿಕ್ಕಿದೆ, ಆದ್ದರಿಂದ ನೀನೂ ಇದಕ್ಕೆ ಅರ್ಹ'. ಈ ಸಿಗುವಿಕೆಯೇ, ಇದರ ಹಿಂದಿನ ಸೈಂಟಿಫಿಕ್ ಸರ್ಕಮ್‌ಸ್ಟೆನ್ಷಿಯಲ್ ಎವಿಡೆನ್ಸ್ ಆಗಿದೆ. ಹೀಗಾಗಿ

ನಮಗೆ ಯಾರು ಸಿಕ್ಕಿದ್ದಾರೋ, ಅವರನ್ನು ಅಧಿಕಾರಿ ಎಂದು ತಿಳಿಯಲಾಗುತ್ತದೆ. ಅವನು ಯಾವ ಆಧಾರದ ಮೇಲೆ ಸಿಗುತ್ತಾನೆ? ಆತ ಅಧಿಕಾರಿಯಾಗಿದ್ದಾನೆ, ಈ ಕಾರಣದಿಂದಲೇ ನನ್ನನ್ನು ಭೇಟಿಯಾಗುತ್ತಾನೆ. ನನ್ನನ್ನು ಭೇಟಿಯಾದಾಗ್ಯೂ ಆತನಿಗೆ ಪ್ರಾಪ್ತಿಯಾಗಲಿಲ್ಲವೆಂದರೆ, ಆಗ ಅದು ಆತನ ಅಂತರಾಯ ಅಥವಾ ಪ್ರಾರಬ್ಧ ಕರ್ಮಗಳು ಬಾಧಕವಾಗಿವೆ ಎಂದರ್ಥ.

## ಕ್ರಮದಲ್ಲಿ 'ಮಾಡಬೇಕಾಗುತ್ತದೆ' ಮತ್ತು ಅಕ್ರಮದಲ್ಲಿ...

ಒಬ್ಬ ಸಹೋದರ ಒಮ್ಮೆ ಕ್ರಮ ಮತ್ತು ಅಕ್ರಮದಲ್ಲಿ ವ್ಯತ್ಯಾಸವೇನು ಎಂದು ಪ್ರಶ್ನೆ ಮಾಡಿದನು. ಆಗ ನಾನು, ಕ್ರಮವೆಂದರೆ, ಎಲ್ಲರೂ ಹೇಳುವಂತೆ ಕೆಟ್ಟದನ್ನು ಬಿಟ್ಟುಬಿಡುವುದು ಮತ್ತು ಒಳ್ಳೆಯದನ್ನು ಮಾಡುವುದು ಎಂದು ಹೇಳಿದೆ. ಅಂದರೆ, ಕಪಟ-ಲೋಭಗಳನ್ನು ತೊರೆದು ಒಳ್ಳೆಯದನ್ನು 'ಮಾಡಲು' ಹೇಳುವುದು. ನೀವು ಇಲ್ಲಿಯವರೆಗೆ ಕಂಡಿರುವುದು ಇದನ್ನೇ ಅಲ್ಲವೇ? ಹಾಗು ಅಕ್ರಮವೆಂದರೆ, ಮಾಡಬೇಕಾಗುವಂಥದ್ದು ಏನೂ ಇಲ್ಲ, ಕರೋಮಿ-ಕರೋಸಿ-ಕರೋತಿ ಎಂಬುದು ಇಲ್ಲದಿರುವುದು!

ಅಕ್ರಮ ವಿಜ್ಞಾನವಂತೂ ಬಹಳ ದೊಡ್ಡ ಆಶ್ಚರ್ಯವೇ ಆಗಿದೆ. ಇಲ್ಲಿ ಆತ್ಮಜ್ಞಾನವನ್ನು ತೆಗೆದುಕೊಂಡ ಮಾರನೆಯ ದಿನದಿಂದಲೇ ವ್ಯಕ್ತಿಯಲ್ಲಿ ಪರಿವರ್ತನೆ ಉಂಟಾಗುತ್ತದೆ. ಇದನ್ನು ಕೇಳುತ್ತಲೇ ಜನರಲ್ಲಿ ಈ ವಿಜ್ಞಾನ ಸಮ್ಮತವಾಗುತ್ತದೆ ಮತ್ತು ಅವರು ಇಲ್ಲಿಗೆ ಸೆಳೆಯಲ್ಪಡುತ್ತಾರೆ.

ಮೂಲವಾಗಿ, ಅಕ್ರಮದಲ್ಲಿ ಆರಂಭ ಒಳಗಿನಿಂದಲೇ ಆಗುತ್ತದೆ. ಕ್ರಮ ಮಾರ್ಗದಲ್ಲಿ ಶುದ್ಧತೆಯು ಒಳಗಿನಿಂದ ಉಂಟಾಗಲು ಸಾಧ್ಯವಿಲ್ಲ, ಏಕೆಂದರೆ ಕೆಪಸಿಟಿ (ಸಾಮರ್ಥ್ಯ) ಇರುವುದಿಲ್ಲ, ಅಂತಹ ಮಶಿನರಿ (ಯಂತ್ರ) ಇಲ್ಲ, ಹೀಗಾಗಿ ಹೊರಗಿನ ವಿಧಾನವನ್ನು ಅನುಸರಿಸಲಾಗುತ್ತದೆ. ಆದರೆ ಆ ಹೊರಗಿನ ವಿಧಾನ ಒಳಗೆ ತಲುಪುವುದು ಯಾವಾಗ? ಮನಸ್ಸು-ಮಾತು-ಕ್ರಿಯೆಗಳು ಒಂದೇ ರೀತಿ ಇದ್ದರೆ, ಏಕತೆಯನ್ನು ಹೊಂದಿದ್ದರೆ, ಆಗ ಒಳಗೆ ತಲುಪುತ್ತದೆ ನಂತರ ಒಳಗೆ ಶುದ್ಧತೆಯು ಆರಂಭವಾಗುತ್ತದೆ. ಮೂಲತಃ (ಈ ದಿನಗಳಲ್ಲಿ), ಮನಸ್ಸು-ಮಾತು-ಕ್ರಿಯೆಗಳಲ್ಲಿ ಏಕತೆಯೇ ಇರುವುದಿಲ್ಲ.

## ಏಕಾತ್ಮಯೋಗ ಮುರಿದಿದ್ದರ ಪರಿಣಾಮವಾಗಿ ಅಕ್ರಮ ಪ್ರಕಟವಾಯಿತು

ಜಗತ್ತು ಸ್ಟೆಪ್ ಬೈ ಸ್ಟೆಪ್, ಕ್ರಮವಾಗಿ ಮುಂದುವರೆಯುವಂತಹ ಮೋಕ್ಷ ಮಾರ್ಗವನ್ನು ಹುಡುಕಿಕೊಂಡಿತು. ಎಲ್ಲಿಯವರೆಗೆ ಮನಸ್ಸಿನಲ್ಲಿ ಏನಿದೆಯೋ ಅದೇ ಮಾತಿನಲ್ಲಿ ನುಡಿಯಲಾಗುತ್ತಿದ್ದು, ಅದರಂತೆಯೇ ನಡವಳಿಕೆ ಇರುತ್ತದೋ, ಅಲ್ಲಿಯವರೆಗೆ ಮಾತ್ರ ಅಂತಹ ಮೋಕ್ಷಮಾರ್ಗ ಕೆಲಸ ಮಾಡುತ್ತದೆ. ಇಲ್ಲವಾದರೆ ಮಾರ್ಗ ಮುಚ್ಚಿ ಹೋಗುತ್ತದೆ. ಈ ಕಾಲದಲ್ಲಿ ಮನಸ್ಸು-ಮಾತು-ಕ್ರಿಯೆಯ ಏಕತೆ ಮುರಿದುಹೋಗಿದೆ, ಹೀಗಾಗಿ ಕ್ರಮ ಮಾರ್ಗಕ್ಕೆ ಫ್ರಾಕ್ಚರ್ ಆಗಿಬಿಟ್ಟಿದೆ. ಅದಕ್ಕೇ ಅಲ್ಲವೇ ನಾನು ಹೇಳುವುದು, ಕ್ರಮ ಮಾರ್ಗದ ಬೇಸ್‌ಮೆಂಟ್ ಹಾಳಾಗಿದೆ. ಆದ್ದರಿಂದಲೇ ಅಕ್ರಮ ಹೊರಬಂದಿರುವುದು. ಇಲ್ಲಿ ಎಲ್ಲಕ್ಕೂ ಅನುಮತಿ ಇದೆ. ನೀವು ಹೇಗಿದ್ದೀರಿ ಹಾಗೆಯೇ ಸರಿ, ನೀವು ನನಗೆ ದೊರೆತಿರಲ್ಲವೇ ಸಾಕು! ಈಗ, ನಮಗೆ ಇನ್ಯಾವುದೇ ತರಲೆ-ತಾಪತ್ರಯಗಳು ಬೇಡವೇ ಬೇಡ.

## 'ಜ್ಞಾನಿ'ಯ ಕೃಪೆಯಿಂದಲೇ 'ಪ್ರಾಪ್ತಿ'

**ಪ್ರಶ್ನಕರ್ತ:** ನೀವು ಹೇಳಿದಂತಹ ಅಕ್ರಮ ಮಾರ್ಗವು, ನಿಮ್ಮಂತಹ 'ಜ್ಞಾನಿಗಳಿಗೆ' ಸೂಕ್ತವಾಗುತ್ತದೆ, ಸುಲಭವಾಗುತ್ತದೆ. ಆದರೆ ನಮ್ಮಂತಹ ಸಾಮಾನ್ಯರಿಗೆ, ಸಂಸಾರದಲ್ಲಿ ಇರುವಂಥವರಿಗೆ, ಕೆಲಸ ಮಾಡಿಕೊಂಡು ಇರುವವರಿಗೆ ಇದು ಕಷ್ಟಕರ. ಹೀಗಿರುವಾಗ ಇದ್ದಕ್ಕೇನು ಉಪಾಯ?

**ದಾದಾಶ್ರೀ:** 'ಜ್ಞಾನಿ ಪುರುಷರೊಳಗೆ' ಭಗವಾನ್ ಪ್ರಕಟವಾಗಿಬಿಟ್ಟಿರುತ್ತಾರೆ, ಹದಿನಾಲ್ಕು ಲೋಕಗಳ ನಾಥ ಪ್ರಕಟವಾಗಿಬಿಟ್ಟಿರುತ್ತಾರೆ, ಅಂತಹ ಜ್ಞಾನಿ ಪುರುಷರು ದೊರಕಿದ ನಂತರ ಇನ್ನೇನು ತಾನೇ ಉಳಿದಿದೆ? ನಿಮ್ಮ ಶಕ್ತಿಯಿಂದ ಆಗಬೇಕಾದ್ದು ಏನೂ ಇಲ್ಲ. ಅವರ ಕೃಪೆಯಿಂದ ಆಗುತ್ತದೆ. ಕೃಪೆಯಿಂದ ಎಲ್ಲವೂ ಬದಲಾಗಿಬಿಡುತ್ತದೆ. ಆದ್ದರಿಂದ ಇಲ್ಲಿ ನೀವು ಏನು ಕೇಳುತ್ತೀರೋ ಆ ಎಲ್ಲವುಗಳ ಲೆಕ್ಕಾಚಾರ ಪೂರ್ಣವಾಗಿಬಿಡುತ್ತದೆ. ನೀವು ಮಾಡಬೇಕಾದ್ದು ಏನೂ ಇಲ್ಲ. ನೀವು ಮಾಡಬೇಕಾದ್ದು ಏನಾದರೂ ಇರುವುದೆಂದಾದರೆ ಅದು 'ಜ್ಞಾನಿ ಪುರುಷರ' ಆಜ್ಞೆಯಲ್ಲಿರುವುದು ಮಾತ್ರ. ಇದು 'ಅಕ್ರಮ ವಿಜ್ಞಾನ'ವಾಗಿದೆ. ಅರ್ಥಾತ್ ಪ್ರತ್ಯಕ್ಷ ಭಗವಾನರಿಂದ ಕೆಲಸ ಪೂರೈಸಿಕೊಳ್ಳುವುದು ಮತ್ತು ಅವರು ನಿಮ್ಮೊಂದಿಗೆ ಪ್ರತಿಕ್ಷಣವೂ ಇರುವುದು, ಒಂದೆರಡು ಗಂಟೆಗಳ ಕಾಲವಲ್ಲ.

**ಪ್ರಶ್ನಕರ್ತ:** ಅರ್ಥಾತ್, ಎಲ್ಲವನ್ನೂ ಅವರಿಗೆ ಒಪ್ಪಿಸಿಬಿಟ್ಟರೆ, ಅವರೇ ಎಲ್ಲವನ್ನೂ ಮಾಡುತ್ತಾರೆಯೇ?

**ದಾದಾಶ್ರೀ:** ಹೌದು ಎಲ್ಲವನ್ನೂ ಮಾಡುತ್ತಾರೆ, ನೀವು ಮಾಡಬೇಕಾದ್ದು ಏನೂ ಇಲ್ಲ. ಮಾಡುವುದರಿಂದ ಕರ್ಮ ಬಂಧನ ಉಂಟಾಗುತ್ತದೆ. ನೀವು ಮಾಡಬೇಕಾದುದೆಂದರೆ ಅದು ಕೇವಲ ಲಿಫ್ಟ್‌ನಲ್ಲಿ ಕುಳಿತುಕೊಳ್ಳುವುದು. ಲಿಫ್ಟ್‌ನಲ್ಲಿ ಐದು ಆಜ್ಞೆಗಳನ್ನು ಪಾಲಿಸಬೇಕಾಗುತ್ತದೆ. ಲಿಫ್ಟ್‌ನಲ್ಲಿ ಕುಳಿತ ನಂತರ ಹಾರುವುದು–ಧುಮುಕುವುದು ಮಾಡಬೇಡಿ, ಕೈ ಹೊರಹಾಕಬೇಡಿ, ನೀವು ಮಾಡಬೇಕಾದ್ದು ಇಷ್ಟೇ. ಇಂತಹ ಮಾರ್ಗ ಹೊರಬರುವುದು ತೀರಾ ಅಪರೂಪ, ಇದು ಪುಣ್ಯವಂತರಿಗಾಗಿಯೇ ಆಗಿದೆ. ಇದನ್ನು ಪ್ರಪಂಚದ ಹನ್ನೊಂದನೇ ಅದ್ಭುತವೆಂದು ಕರೆಯಲಾಗುತ್ತದೆ! ಯಾರಿಗೆ ಟಿಕೆಟ್ ದೊರೆಯುತ್ತದೋ ಅವರ ಕೆಲಸವಾದಂತೆಯೇ.

## ಅಕ್ರಮ ಮಾರ್ಗ ಲಭ್ಯವಿದೆ

ಇದರಲ್ಲಿ ನನ್ನ ಉದ್ದೇಶ ಏನೆಂದರೆ "ಯಾವ ಸುಖವು ನನಗೆ ಪ್ರಾಪ್ತವಾಯಿತೋ ಆ ಸುಖವು ನಿಮಗೂ ಪ್ರಾಪ್ರವಾಗಬೇಕು" ಎಂಬುದು. ಅರ್ಥಾತ್ ಪ್ರಕಟವಾಗಿರುವಂತಹ ಈ ವಿಜ್ಞಾನವನ್ನು, ಹಾಗೇ ಅದುಮಿಡಲು ಸಾಧ್ಯವಿಲ್ಲ. ನಾವು ನಮ್ಮ ನಂತರ ಜ್ಞಾನಿಗಳ ವಂಶಾವಳಿಯನ್ನೇ ಬಿಟ್ಟು ಹೋಗುತ್ತೇವೆ. ನಮ್ಮ ಉತ್ತರಾಧಿಕಾರಿಯನ್ನು ಬಿಟ್ಟುಹೋಗುತ್ತೇವೆ ಮತ್ತು ಆ ನಂತರ ಜ್ಞಾನಿಗಳ ಲಿಂಕ್ ಮುಂದುವರೆಯುತ್ತದೆ. ಆದ್ದರಿಂದಲೇ ಜೀವಂತ ಮೂರ್ತಿಯನ್ನು ಹುಡುಕಿ. ಅವರಿಲ್ಲದೇ ಪರಿಹಾರ ದೊರೆಯದು.

ನಾನು ಕೆಲವರಿಗೆ ಸ್ವತಃ ನನ್ನ ಕೈಯಿಂದಲೇ ಸಿದ್ಧಿಪ್ರದಾನ ಮಾಡಲಿರುವೆನು. ಮುಂದೆ ನನ್ನ ಬಳಿಕ, ಯಾರಾದರೂ ಬೇಕೋ ಬೇಡವೋ? ಮುಂದಿನ ಪೀಳಿಗೆಗೆ ಈ ಮಾರ್ಗ ಬೇಕಲ್ಲವೇ?

## 9. ಜ್ಞಾನವಿಧಿ ಎಂದರೇನು?

**ಪ್ರಶ್ನಕರ್ತ:** ನಿಮ್ಮ 'ಜ್ಞಾನವಿಧಿ' ಎಂದರೇನು?

**ದಾದಾಶ್ರೀ:** ಜ್ಞಾನವಿಧಿಯೆಂದರೆ ಆತ್ಮ ಮತ್ತು ಅನಾತ್ಮವನ್ನು ಪ್ರತ್ಯೇಕಗೊಳಿಸುವುದು (ಸೆಪರೇಶನ್ ಮಾಡುವುದು), ಶುದ್ಧ ಚೇತನ ಮತ್ತು (ಪುದ್‌ಗಲ್) ಜಡ ಎರಡರ ಸೆಪರೇಶನ್ ಮಾಡುವುದು.

**ಪ್ರಶ್ನಕರ್ತ:** ಈ ಸಿದ್ಧಾಂತವೇನೋ ಸರಿಯೇ, ಆದರೆ ಅದರ ಪದ್ಧತಿ ಅಥವಾ ವಿಧಾನ ಹೇಗಿರುತ್ತದೆ ಎಂದು ತಿಳಿಯಬೇಕಿದೆ.

**ದಾದಾಶ್ರೀ:** ಇದರಲ್ಲಿ ಕೊಡುವುದು-ತೆಗೆದುಕೊಳ್ಳುವುದು ಏನೂ ಇರುವುದಿಲ್ಲ, ಇಲ್ಲಿ ಕುಳಿತು ಏನು ಹೇಳಿಕೊಡಲಾಗುತ್ತದೋ ಅದನ್ನು ಹಾಗೆಯೇ ಪುನರಾವರ್ತಿಸುವುದು ಅವಶ್ಯಕ. ('ನಾನು ಯಾರು' ಎಂಬುದನ್ನು ಪರಿಚಯಿಸುವ, ಜ್ಞಾನವನ್ನು ಉಂಟು ಮಾಡಿಸುವ, ಇದು ಎರಡು ಗಂಟೆಯ ಜ್ಞಾನಪ್ರಯೋಗವಾಗಿರುತ್ತದೆ. ಇದರಲ್ಲಿ ನಲವತ್ತೆಂಟು ನಿಮಿಷ ಆತ್ಮ-ಅನಾತ್ಮದ ಭೇದ ತಿಳಿಸುವಂತಹ ಭೇದವಿಜ್ಞಾನದ ವಾಕ್ಯಗಳನ್ನು ಹೇಳಿಸಲಾಗುತ್ತದೆ. ಇದನ್ನು ಎಲ್ಲರೂ ಸಾಮೂಹಿಕವಾಗಿ ಒಟ್ಟಿಗೆ ಹೇಳಬೇಕಾಗುತ್ತದೆ. ಅದರ ನಂತರದ ಒಂದು ಗಂಟೆಯಲ್ಲಿ – ಐದು ಆಜ್ಞೆಗಳನ್ನು ಉದಾಹರಣೆಗಳ ಸಹಿತ ವಿಸ್ತಾರವಾಗಿ ತಿಳಿಸಲಾಗುತ್ತದೆ. ಹಾಗು ಇನ್ನುಳಿದ ಜೀವನವನ್ನು ಯಾವ ರೀತಿಯಲ್ಲಿ ನಡೆಸುವುದು, ಮತ್ತು ಹೊಸದಾಗಿ ಕರ್ಮಗಳನ್ನು ಕಟ್ಟಿಕೊಳ್ಳದೆ ಹಳೆಯ ಕರ್ಮಗಳನ್ನು ಸಂಪೂರ್ಣವಾಗಿ ಮುಗಿಸುತ್ತಾ ಅದರ ಜೊತೆ ಜೊತೆಯಲ್ಲಿ 'ನಾನು ಶುದ್ಧಾತ್ಮ' ಎಂಬ ಲಕ್ಷ್ಯ ಯಾವಾಗಲೂ ಇರಿಸಿಕೊಳ್ಳುವುದು ಹೇಗೆ ಎಂಬುದನ್ನು ವಿವರಿಸಲಾಗುತ್ತದೆ!)

## 10. ಜ್ಞಾನವಿಧಿಯಲ್ಲಿ ಏನಾಗುತ್ತದೆ?

ನಾವು ಜ್ಞಾನ ನೀಡುತ್ತೇವೆ, ಇದರಿಂದ ಕರ್ಮಗಳು ಭಸ್ಮವಾಗಿಬಿಡುತ್ತವೆ ಮತ್ತು ಆ ಸಮಯದಲ್ಲಿ ಅನೇಕ ಆವರಣಗಳು ಕಳಚಿ ಬೀಳುತ್ತವೆ. ಆಗ ಭಗವಂತನ ಕೃಪೆಯಾಗುತ್ತದೆ ಮತ್ತು ಅದರೊಂದಿಗೆ ತಾನು ಜಾಗೃತನೂ ಆಗುತ್ತಾನೆ. ಒಮ್ಮೆ ಜಾಗೃತಿ ಬಂದ ನಂತರ ಅದು ಹೋಗುವುದಿಲ್ಲ. ಆನಂತರದಿಂದ, ನಿರಂತರವಾಗಿ ಜಾಗೃತಿಯು ಇರುತ್ತದೆ. ಅಂದರೆ ನಿರಂತರವಾಗಿ ಆತ್ಮಪ್ರತೀತಿ ಇದ್ದೇ ಇರುತ್ತದೆ. ಆತ್ಮದ ಅನುಭವವಾಯಿತೆಂದರೆ, ಅದರರ್ಥ ದೇಹಾಧ್ಯಾಸ (ನಾನು ದೇಹವೆಂಬ ಭಾವನೆ) ಬಿಟ್ಟುಹೋಯಿತೆಂದು. ದೇಹಾಧ್ಯಾಸ ಬಿಟ್ಟುಹೋಯಿತೆಂದರೆ, ಅದರರ್ಥ ಕರ್ಮಬಂಧವೂ ಮುಗಿಯಿತೆಂದು. ಮೊದಲಿಗೆ ಅಜ್ಞಾನದಿಂದ ಮುಕ್ತಿಯು ದೊರೆಯುವುದು ನಂತರ ಒಂದೆರಡು ಜನ್ಮಗಳಲ್ಲಿ ಅಂತಿಮ ಮುಕ್ತಿ ದೊರೆಯುತ್ತದೆ.

### ಜ್ಞಾನಾಗ್ನಿಯಿಂದ ಕರ್ಮಗಳು ಭಸ್ಮವಾಗುತ್ತವೆ

ಈ 'ಜ್ಞಾನ'ವನ್ನು ನೀಡುವಂತಹ ದಿನ ಏನು ಘಟಿಸುತ್ತದೆ? ಜ್ಞಾನಾಗ್ನಿಯಿಂದ ಆತನ ಕರ್ಮಗಳೆಲ್ಲಾ ಭಸ್ಮವಾಗುತ್ತವೆ. ಎರಡು ವಿಧವಾದ ಕರ್ಮಗಳು ಭಸ್ಮವಾಗಿಬಿಡುತ್ತವೆ ಮತ್ತು

ಒಂದು ವಿಧದ ಕರ್ಮಗಳು ಉಳಿದಿರುತ್ತವೆ. ಯಾವ ಕರ್ಮಗಳು ಆವಿಯಂತೆ ಇರುತ್ತವೋ ಅವು ನಾಶವಾಗುತ್ತವೆ. ಯಾವ ಕರ್ಮಗಳು ನೀರಿನಂತೆ ಇರುತ್ತವೋ ಅವುಗಳೂ ನಾಶವಾಗುತ್ತವೆ. ಆದರೆ ಯಾವ ಕರ್ಮಗಳು ಮಂಜುಗಡ್ಡೆಯಂತೆ ಇರುತ್ತವೆಯೋ, ಅವುಗಳು ನಾಶವಾಗುವುದಿಲ್ಲ. ಏಕೆಂದರೆ ಅವು ಗಟ್ಟಿಯಾಗಿಬಿಟ್ಟಿರುತ್ತವೆ. ಯಾವ ಕರ್ಮಗಳು ಫಲ ನೀಡಲು ಸಿದ್ಧವಾಗಿ ನಿಂತಿವೆಯೋ ಅವು ನಮ್ಮನ್ನು ಬಿಡುವುದಿಲ್ಲ. ಆದರೆ ನೀರು ಮತ್ತು ಆವಿಯಂತಹ ಕರ್ಮಗಳನ್ನು ಜ್ಞಾನಾಗ್ನಿಯು ಭಸ್ಮ ಮಾಡಿಬಿಡುತ್ತದೆ. ಆದ್ದರಿಂದ ಜ್ಞಾನವನ್ನು ಪಡೆಯುತ್ತಲೇ ಜನರು ಸಂಪೂರ್ಣವಾಗಿ ಹಗುರ ಮನಸ್ಸಿನವರಾಗುತ್ತಾರೆ. ಅವರ ಜಾಗೃತಿ ಧಿಡೀರನೆ ಹೆಚ್ಚಾಗುತ್ತದೆ. ಏಕೆಂದರೆ ಎಲ್ಲಿಯವರೆಗೆ ಕರ್ಮಗಳು ಭಸ್ಮವಾಗುವುದಿಲ್ಲವೋ ಅಲ್ಲಿಯವರೆಗೆ ಮನುಷ್ಯನ ಜಾಗೃತಿ ಹೆಚ್ಚುವುದೇ ಇಲ್ಲ. ಮಂಜುಗಡ್ಡೆಯ ರೂಪದಲ್ಲಿರುವ ಕರ್ಮಗಳನ್ನು ನಾವು ಅನುಭವಿಸಿಯೇ ತೀರಬೇಕು. ಆದರೂ, ಅವನ್ನು ಸರಳವಾಗಿ ಹೇಗೆ ಅನುಭವಿಸುವುದು ಎಂಬುದರ ಕುರಿತು ನಾನು ಆಗಲೇ ಹೇಳಿಕೊಟ್ಟಿದ್ದೇನೆ: ಅದು **"ದಾದಾ ಭಗವಾನ್‌ನ ಅಸೀಮ್ ಜೈ ಜೈಕಾರ್ ಹೋ"** ಎಂದು ಹೇಳಿ, **"ತ್ರಿಮಂತ್ರವನ್ನು"** ಹೇಳಿ, **"ನವ ಕಲಮೊ"** (ಒಂಬತ್ತು ಗೂಢಾರ್ಥಗಳುಳ್ಳ ಹೇಳಿಕೆಗಳು) ಹೇಳಿ.

ಸಾಂಸಾರಿಕ ದುಃಖಗಳು ಇಲ್ಲದಿರುವಿಕೆಯು ಮುಕ್ತಿಯ ಮೊದಲ ಅನುಭವವೆಂದು ಕರೆಯಲ್ಪಡುತ್ತದೆ. ನಾವು ನಿಮಗೆ 'ಜ್ಞಾನ' ನೀಡಿದ ನಂತರ, ಮಾರನೆಯ ದಿನದಿಂದಲೇ ಅದು ನಿಮಗೆ ಅನುಭವವಾಗುತ್ತದೆ. ಹಾಗು, ಈ ಶರೀರದ ಹೊರೆ, ಕರ್ಮಗಳ ಹೊರೆಗಳೆಲ್ಲವೂ ಕಳಚಿದಾಗ ಮತ್ತೊಂದು ರೀತಿಯ ಅನುಭವವಾಗುತ್ತದೆ. ಆನಂತರದ ಆನಂದ ಎಷ್ಟರ ಮಟ್ಟಿನದೆಂದರೆ ಅದರ ವರ್ಣನೆ ಮಾಡುವುದು ಅಸಾಧ್ಯ!!

**ಪ್ರಶ್ನಕರ್ತ:** ನಿಮ್ಮ ಬಳಿ ದೊರೆತ ಜ್ಞಾನವೇ ಆತ್ಮಜ್ಞಾನವಲ್ಲವೇ?

**ದಾದಾಶ್ರೀ:** ಯಾವುದು ದೊರೆಯುತ್ತದೆಯೋ, ಅದು ಆತ್ಮಜ್ಞಾನವಲ್ಲ. ಯಾವುದು ಒಳಗೆ ಪ್ರಕಟಗೊಳ್ಳುತ್ತದೋ, ಅದು ಆತ್ಮಜ್ಞಾನ. ನಾವು ಹೇಳಿಕೊಟ್ಟಿದ್ದನ್ನು ನೀವು ಹೇಳಿದಾಗ ಪಾಪಗಳೆಲ್ಲಾ ಭಸ್ಮವಾಗುತ್ತದೆ ಮತ್ತು ಒಳಗೆ ಜ್ಞಾನ ಪ್ರಕಟವಾಗುತ್ತದೆ. ಅದು ನಿಮ್ಮೊಳಗೆ ಪ್ರಕಟವಾಗಿದೆಯಲ್ಲವೇ?

**ಪ್ರಶ್ನಕರ್ತ:** ಹೌದು, ಆಗಿದೆ.

**ದಾದಾಶ್ರೀ:** ಆತ್ಮ ಪ್ರಾಪ್ತಿ ಮಾಡಿಕೊಳ್ಳುವುದು ಏನು ಸುಲಭವೇ? ಅದರ ಮೊದಲಿಗೆ (ಜ್ಞಾನವಿಧಿಯ ಸಮಯದಲ್ಲಿ) ಜ್ಞಾನಾಗ್ನಿಯಲ್ಲಿ ಪಾಪಗಳೆಲ್ಲವೂ ಭಸ್ಮವಾಗುತ್ತದೆ. ಎರಡನೆಯದಾಗಿ ಏನಾಗುತ್ತದೆ? ಆತ್ಮ ಮತ್ತು ದೇಹ ಬೇರ್ಪಡುತ್ತದೆ. ಮೂರನೆಯದಾಗಿ

ಏನಾಗುತ್ತದೆ ಎಂದರೆ, ಭಗವಾನರ ಕೃಪೆಯ ಧಾರೆ ಹರಿದು ಬರುತ್ತದೆ, ಇದರಿಂದ ಸತತವಾಗಿ ಜಾಗೃತಿ ಉತ್ಪನ್ನವಾಗಿ, ಅವರಲ್ಲಿ ಪ್ರಜ್ಞೆ ಪ್ರಾರಂಭವಾಗಿಬಿಡುತ್ತದೆ.

## ಬಿದಿಗೆಯಿಂದ ಹುಣ್ಣಿಮೆಯವರೆಗೆ

ಅನಾದಿ ಕಾಲದಿಂದಲೂ, ಅಂದರೆ ಲಕ್ಷಾಂತರ ಜನ್ಮಗಳಿಂದಲೂ ಅಮಾವಾಸ್ಯೆಯಲ್ಲೇ, ಅಮಾವಾಸ್ಯೆ ಎಂದರೆ ನಿಮಗೆ ಅರ್ಥವಾಯಿತೇ? 'ನೋ ಮೂನ್', 'ಡಾರ್ಕ್‌ನೆಸ್'ನಲ್ಲೇ ಎಲ್ಲರೂ ಬದುಕುತ್ತಿದ್ದಾರೆ. ಬೆಳಕನ್ನು ಕಂಡೇ ಇಲ್ಲ. ಮೂನ್ (ಚಂದ್ರ) ನನ್ನು ನೋಡೇ ಇಲ್ಲ! ಆದರೆ ನಾವು ಜ್ಞಾನ ನೀಡಿದಾಗ ಮೂನ್ ಪ್ರಕಟವಾಗಿಬಿಡುತ್ತಾನೆ. ಮೊದಲು ಅವನು ಬಿದಿಗೆ ಚಂದ್ರನಷ್ಟು ಬೆಳಕನ್ನು ನೀಡುತ್ತಾನೆ. ನಾವಂತೂ ಜ್ಞಾನವನ್ನು ಸಂಪೂರ್ಣವಾಗಿ ನೀಡುತ್ತೇವೆ ಆದರೆ ಒಳಗೆ ಎಷ್ಟು ಪ್ರಕಟವಾಗುತ್ತದೆ? ಬಿದಿಗೆ ಚಂದ್ರಮನಷ್ಟು. ಈ ಜನ್ಮದಲ್ಲೇ ಹುಣ್ಣಿಮೆಯಾಗಿ ಬಿಡುವಂತೆ ಮಾಡುವುದು ನಿಮ್ಮ ಕೈಲಿದೆ. ನಂತರ ಬಿದಿಗೆಯಿಂದ ತದಿಗೆಯಾಗುತ್ತದೆ, ತದಿಗೆಯಿಂದ ಚೌತಿಯಾಗುತ್ತದೆ, ಚೌತಿಯಿಂದ ಪಂಚಮಿಯಾಗುತ್ತದೆ . . . . . ಮತ್ತು ಹುಣ್ಣಿಮೆಯಾದರೆ, ಕಂಪ್ಲೀಟ್ ಆದಂತೆಯೇ! ಅರ್ಥಾತ್ ಕೈವಲ್ಯ ಜ್ಞಾನವಾದಂತೆಯೇ. ಇನ್ನು ಕರ್ಮಗಳು ಬಂಧನವನ್ನು ಉಂಟು ಮಾಡುವುದಿಲ್ಲ, ಕರ್ಮಗಳ ಬಂಧನವು ನಿಂತುಹೋಗುತ್ತದೆ. ಕೋಪ–ಅಹಂಕಾರ–ಮಾಯೆ–ಲೋಭ ನಿಂತುಹೋಗುತ್ತವೆ. ಮೊದಲು ಅಂದುಕೊಳ್ಳಲಾಗುತ್ತಿದ್ದ 'ನಾನು ಚಂದೂಭಾಯ್' ಎಂಬ ಭಾವನೆ, ಅದೇ ಒಂದು ಭ್ರಾಂತಿಯಾಗಿತ್ತು. ವಾಸ್ತವದಲ್ಲಿ 'ನಾನು ಚಂದೂಭಾಯ್' ಎಂಬ ಆ ಭ್ರಾಂತಿ ಹೊರಟುಹೋಯಿತು. ಈಗ ನಿನಗೆ ಯಾವ ಆಜ್ಞೆಗಳನ್ನು ನೀಡಲಾಗಿದೆಯೋ ಅವುಗಳ ಪಾಲನೆಯಲ್ಲಿ ನೀನಿರಬೇಕು.

ಇಲ್ಲಿ ಜ್ಞಾನವಿಧಿಗೆ ಬಂದರೆ ನಾನು ಎಲ್ಲಾ ಪಾಪಗಳನ್ನೂ ತೊಳೆದುಬಿಡುತ್ತೇನೆ, ನಂತರ ನಿಮಗೆ ನಿಮ್ಮಲ್ಲಿನ ದೋಷಗಳು ಕಂಡುಬರುತ್ತವೆ ಮತ್ತು ತನ್ನಲ್ಲೇ ದೋಷಗಳು ಕಂಡುಬರತೊಡಗಿದಾಗ ಮೋಕ್ಷದೆಡೆ ಸಾಗುವುದಕ್ಕೆ ತಯಾರಿ ಆಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು.

## 11. ಆತ್ಮಜ್ಞಾನವನ್ನು ಪಡೆದ ನಂತರ ಆಜ್ಞೆಗಳ ಪಾಲನೆಯ ಮಹತ್ವ

### ಆಜ್ಞೆಗಳು, ಜ್ಞಾನದ (ಪ್ರೊಟೆಕ್ಷನ್‌ಗಾಗಿ) ರಕ್ಷಣೆಗಾಗಿ

ನಾವು ಜ್ಞಾನ ನೀಡಿದ ಬಳಿಕ ನಿಮಗೆ ಆತ್ಮಾನುಭವವಾದ ನಂತರ ಇನ್ನೇನು ಕೆಲಸ ಉಳಿಯುತ್ತದೆ? ಜ್ಞಾನಿಪುರುಷರ 'ಆಜ್ಞೆ'ಯ ಪಾಲನೆ. 'ಆಜ್ಞೆಯೇ' ಧರ್ಮ ಮತ್ತು 'ಆಜ್ಞೆಯೇ' ತಪಸ್ಸು. ಆದರೆ, ನಮ್ಮ ಆಜ್ಞೆಯು ಸಂಸಾರದಲ್ಲಿ ಯಾವುದೇ ತೊಂದರೆಯನ್ನೂ ಉಂಟು ಮಾಡುವುದಿಲ್ಲ. ಸಂಸಾರದಲ್ಲಿದ್ದರೂ ಕೂಡ ಸಂಸಾರ ಸ್ಪರ್ಶಿಸುವುದಿಲ್ಲ, ಹಾಗಿದೆ ಈ ಅಕ್ರಮ ವಿಜ್ಞಾನ.

ಈಗ ಕಾಲ ಹೇಗಾಗಿದೆಯೆಂದರೆ, ಎಲ್ಲೆಲ್ಲೂ ಕುಸಂಗವೇ ಕಂಡುಬರುತ್ತಿದೆ. ಅಡುಗೆಮನೆಯಿಂದ ಆರಂಭಿಸಿ ಆಫೀಸ್‌ವರೆಗೆ, ಮನೆಯಲ್ಲಿ, ರಸ್ತೆಯಲ್ಲಿ, ಹೊರಗೆ, ಗಾಡಿಯಲ್ಲಿ, ರೈಲಿನಲ್ಲಿ, ಹೀಗೆ ಎಲ್ಲೆಲ್ಲೂ ಕುಸಂಗವೇ ಇದೆ. ಈ ಕೆಟ್ಟಸಂಗ ಅಥವಾ ಕುಸಂಗವು, ನಾನು ನಿಮಗೆ ಎರಡು ಗಂಟೆಗಳ ಕಾಲ ನೀಡಿದಂತಹ ಜ್ಞಾನವನ್ನು ತಿಂದುಹಾಕುತ್ತದೆ. ಕುಸಂಗವು ತಿಂದು ಹಾಕುವುದಿಲ್ಲವೇ? ಅದಕ್ಕಾಗಿಯೇ ಐದು ಆಜ್ಞೆಗಳ ಬೇಲಿಯ ಪ್ರೊಟೆಕ್ಷನ್ ನೀಡಲಾಗಿರುವುದು. ಇವು ಪ್ರೊಟೆಕ್ಷನ್ ನೀಡುತ್ತಿದ್ದರೆ, ಒಳಗಿನ ಸ್ಥಿತಿಯಲ್ಲಿ ಸ್ವಲ್ಪವೂ ವ್ಯತ್ಯಾಸವಾಗುವುದಿಲ್ಲ. ನನ್ನಿಂದ ನೀಡಲ್ಪಟ್ಟಾಗ ಆ ಜ್ಞಾನ ಯಾವ ಸ್ಥಿತಿಯಲ್ಲಿತ್ತೋ ಅದೇ ಸ್ಥಿತಿಯಲ್ಲಿರುತ್ತದೆ. ಬೇಲಿ ಮುರಿದುಹೋದರೆ ಜ್ಞಾನವು ನಾಶ ಹೊಂದುತ್ತದೆ, ಧೂಳೀಪಟವಾಗುತ್ತದೆ.

ನಾನು ನೀಡಿರುವಂತಹ ಜ್ಞಾನವು (ಆತ್ಮ ಮತ್ತು ಅನಾತ್ಮಗಳ) ಭೇದಜ್ಞಾನವಾಗಿದೆ ಮತ್ತು ಬೇರೆಬೇರೆ ಮಾಡಿದ್ದೂ ಆಗಿದೆ. ಆದರೆ ಅದು ಹಾಗೇ ಬೇರೆಬೇರೆಯಾಗಿಯೇ ಇರಬೇಕೆಂದರೆ ಪ್ರೊಟೆಕ್ಷನ್‌ಗಾಗಿ ನಾನು ಐದು ವಾಕ್ಯಗಳನ್ನು (ಆಜ್ಞೆಗಳನ್ನು) ನೀಡುತ್ತೇನೆ. ಇದರಿಂದ ಈ ಕಲಿಯುಗದಲ್ಲಿ ಯಾರೂ ಇದನ್ನು ಲೂಟಿ ಮಾಡಲು ಸಾಧ್ಯವಾಗುವುದಿಲ್ಲ. ಬೋಧನೆಯ ಬೀಜವನ್ನು ಬಿತ್ತಿದ ನಂತರ ನೀರು ಮುಂತಾದ್ದನ್ನು ಹಾಕಬೇಕಾಗುತ್ತದೆ ಅಲ್ಲವೇ? ಬೇಲಿ ಹಾಕಬೇಕಾಗುತ್ತದೋ ಇಲ್ಲವೋ?

### 'ಜ್ಞಾನ'ದ ನಂತರ ಮಾಡಬೇಕಾದ ಸಾಧನೆ ಏನು?

**ಪ್ರಶ್ನಕರ್ತ:** ಈ ಜ್ಞಾನದ ನಂತರ ಯಾವ ರೀತಿಯ ಸಾಧನೆ ಮಾಡಬೇಕು?

**ದಾದಾಶ್ರೀ:** ಸಾಧನೆಯೆಂದರೆ, ಈ ಐದು ಆಜ್ಞೆಗಳ ಪಾಲನೆ ಮಾಡುವುದೇ ಆಗಿದೆ! ಈಗ ಬೇರಿನ್ನೇನೂ ಸಾಧನೆಯೂ ಇಲ್ಲ. ಉಳಿದ ಎಲ್ಲಾ ಸಾಧನೆಗಳು ಬಂಧನವನ್ನುಂಟು ಮಾಡುತ್ತವೆ. ಈ ಐದು ಆಜ್ಞೆಗಳು ಬಿಡುಗಡೆ ಮಾಡುತ್ತವೆ.

**ಪ್ರಶ್ನಕರ್ತ:** ಈ ಐದು ಆಜ್ಞೆಗಳಲ್ಲಿ ಅಂತಹ ವಿಶೇಷವೇನಿದೆ?

**ದಾದಾಶ್ರೀ:** ಐದು ಆಜ್ಞೆಗಳು ಒಂದು ಬೇಲಿಯಂತಿರುತ್ತವೆ. ಒಳಗಿರುವ ನಿಮ್ಮ ವಸ್ತುವನ್ನು ಯಾರೂ ಕದಿಯದಂತೆ ಸುರಕ್ಷಿತಗೊಳಿಸುವಂತಹ ಬೇಲಿಯನ್ನು ಇಟ್ಟುಕೊಂಡರೆ, ನಿಮ್ಮೊಳಗೆ ನಾವು ಕೊಟ್ಟ ಜ್ಞಾನ, ಯಥಾಸ್ಥಿತಿಯಲ್ಲಿ ಹಾಗೇ ಇರುತ್ತದೆ. ಬೇಲಿ ಸಡಿಲಗೊಂಡರೆ ಯಾರಾದರೂ ಒಳನುಗ್ಗಿ ಹಾಳುಮಾಡಿಬಿಡುತ್ತಾರೆ. ಅದನ್ನು ರಿಪೇರಿ ಮಾಡಲು ಪುನಃ ನನ್ನ ಬಳಿ ಹಿಂದಿರುಗಬೇಕಾಗುತ್ತದೆ. ಎಲ್ಲಿಯವರೆಗೆ ಈ ಐದು ಆಜ್ಞೆಗಳನ್ನು ಪಾಲಿಸುತ್ತೀರೋ ಅಲ್ಲಿಯವರೆಗೆ ನಾವು ನಿರಂತರ ಸಮಾಧಿಯ ಗ್ಯಾರಂಟಿಯನ್ನು ನೀಡುತ್ತೇವೆ.

## ಆಜ್ಞೆಯ ಪಾಲನೆಯಿಂದ ತೀವ್ರ ಪ್ರಗತಿ

**ಪ್ರಶ್ನಕರ್ತ:** ನಿಮ್ಮಿಂದ ಜ್ಞಾನಪ್ರಾಪ್ತಿ ಮಾಡಿಕೊಂಡ ನಂತರ ಆಗುವ ನಮ್ಮ ಪ್ರಗತಿಯ ಸ್ಪೀಡ್ ಯಾವುದನ್ನು ಆಧರಿಸಿದೆ? ಏನು ಮಾಡುವುದರಿಂದ ಪ್ರಗತಿ ವೇಗವಾಗಿ ಆಗುತ್ತದೆ?

**ದಾದಾಶ್ರೀ:** ಐದು ಆಜ್ಞೆಗಳನ್ನು ಪಾಲಿಸಿದರೆ ಎಲ್ಲವೂ ವೇಗವಾಗಿ ಆಗುತ್ತದೆ ಮತ್ತು ಐದು ಆಜ್ಞೆಗಳ ಪಾಲನೆಯಿಂದ ಆವರಣ (ಅಜ್ಞಾನದ ಮುಸುಕು) ಕಳಚುತ್ತಾ ಹೋಗುತ್ತದೆ. ಶಕ್ತಿಗಳು ಪ್ರಕಟವಾಗುತ್ತಾ ಸಾಗುತ್ತವೆ. ಅವ್ಯಕ್ತವಾಗಿರುವಂತಹ ಶಕ್ತಿಗಳು ವ್ಯಕ್ತಗೊಳ್ಳಲು ಆರಂಭವಾಗುತ್ತವೆ. ಐದು ಆಜ್ಞೆಗಳನ್ನು ಪಾಲಿಸುವುದರಿಂದ ಐಶ್ವರ್ಯವು ವ್ಯಕ್ತವಾಗುತ್ತದೆ. ನೀವು ಎಷ್ಟು ದಾದಾರವರ ಆಜ್ಞೆ ಪಾಲನೆ ಮಾಡುತ್ತಿರೋ ಅದರ ಆಧಾರದ ಮೇಲೆ, ಹೆಚ್ಚು ಹೆಚ್ಚು ಶಕ್ತಿಯು ಪ್ರಕಟವಾಗುತ್ತದೆ.

ನಮ್ಮ ಆಜ್ಞೆಯ ವಿಚಾರದಲ್ಲಿ ಸಿನ್ಸಿಯರ್ ಆಗಿರುವುದು ಎಲ್ಲಕ್ಕಿಂತಲೂ ಮುಖ್ಯ ಗುಣವಾಗಿದೆ. ನಮ್ಮ ಆಜ್ಞೆಯ ಪಾಲನೆಯಿಂದ ಯಾರು ಅಬುಧರಾಗುತ್ತಾರೋ ಅವರು ನಮ್ಮಂತೆಯೇ ಆಗಿಬಿಡುತ್ತಾರೆ ಅಲ್ಲವೇ! ಆಜ್ಞೆಯನ್ನು ಸತತವಾಗಿ ಪಾಲಿಸುತ್ತಿದ್ದರೆ ಮತ್ತು ಆಜ್ಞೆಯಲ್ಲಿ ಬದಲಾವಣೆ ಮಾಡದಿದ್ದರೆ, ಯಾವುದೇ ತೊಂದರೆಯಾಗುವುದಿಲ್ಲ.

## ದೃಢನಿಶ್ಚಯದಿಂದಲೇ ಆಜ್ಞೆಯ ಪಾಲನೆ

ದಾದಾರವರ ಆಜ್ಞೆಯ ಪಾಲನೆಯೇ ಬಹಳ ದೊಡ್ಡ ವಿಷಯ. ಆಜ್ಞೆಯನ್ನು ಪಾಲಿಸಲೇಬೇಕು ಎಂದು ದೃಢನಿಶ್ಚಯ ಮಾಡಿಕೊಳ್ಳಬೇಕಾಗುತ್ತದೆ. ಆಜ್ಞೆಯ ಪಾಲನೆಯಾಗುತ್ತಿದೆಯೋ ಇಲ್ಲವೋ ಎಂಬುದನ್ನು ನೀವು ನೋಡಬೇಕಾಗಿಲ್ಲ. ಆಜ್ಞೆಯನ್ನು ಎಷ್ಟು ಪಾಲಿಸಲು ಸಾಧ್ಯವೋ ಅಷ್ಟು ಪಾಲಿಸುತ್ತಾ ಹೋಗಿ. ನೀವು ಮಾಡಬೇಕಾದ್ದು, ಆಜ್ಞೆಯ ಪಾಲನೆಯೇ ಗುರಿ ಎಂದು ದೃಢವಾಗಿ ನಿಶ್ಚಯ ಮಾಡುವುದು.

**ಪ್ರಶ್ನಕರ್ತ:** ಆಜ್ಞೆಯ ಪಾಲನೆಯಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾದರೆ, ಪರವಾಗಿಲ್ಲವೇ?

**ದಾದಾಶ್ರೀ:** ಪರವಾಗಿಲ್ಲ ಎಂದು ಹೇಳಲಾಗದು. ಆಜ್ಞೆಯ ಪಾಲನೆಯನ್ನು ಮಾಡಿಯೇ ಮಾಡುತ್ತೇನೆಂದು ನೀವು ದೃಢನಿಶ್ಚಯ ಮಾಡಬೇಕು. ಬೆಳಗ್ಗೆ ಎದ್ದ ಕೂಡಲೇ ನಿರ್ಧಾರ ಮಾಡಬೇಕು, 'ನಾನು ಐದು ಆಜ್ಞೆಗಳಲ್ಲಿರಬೇಕು, ಅವುಗಳನ್ನು ಪಾಲಿಸಬೇಕು' ಎಂದು ನಿಶ್ಚಯ ಮಾಡಿಕೊಂಡ ಕ್ಷಣದಿಂದಲೇ ನಮ್ಮ ಆಜ್ಞೆಯೊಳಗೆ ಬರುವಿರಿ ಹಾಗು ನನಗೆ ಬೇಕಾದದ್ದು ಇಷ್ಟೇ.

ಆಜ್ಞೆಯನ್ನು ಪಾಲನೆ ಮಾಡುವುದು ಮರೆತು ಹೋದರೆ, ಆಗ ಪ್ರತಿಕ್ರಮಣ ಮಾಡಬೇಕು. ಅದು ಹೇಗೆಂದರೆ, ' ಹೇ ದಾದಾ, ಈ ಎರಡು ಗಂಟೆಗಳ ಕಾಲ ನಿಮ್ಮ ಆಜ್ಞೆಯನ್ನು ಪಾಲಿಸಲು ಮರೆತು ಬಿಟ್ಟೆ. ಆದರೆ ನಾನು ಆಜ್ಞೆಯನ್ನು ಪಾಲಿಸಲೇಬೇಕು. ಈ ನನ್ನ ತಪ್ಪನ್ನು ಕ್ಷಮಿಸಿ.' ಎಂದು ಹೇಳಿದಾಗ, ಹಿಂದಿನ ಎಲ್ಲಾ ಪರೀಕ್ಷೆಗಳೂ ಪಾಸ್. ಪೂರ್ತಿ ನೂರಕ್ಕೆ ನೂರು ನಂಬರ್. ಇದರಲ್ಲಿ ಯಾವುದೇ ಅಪಾಯವಿರುವುದಿಲ್ಲ. ಆಜ್ಞೆಯಲ್ಲಿ ಇದ್ದರೆ, ಸಂಸಾರ ನಿಮಗೆ ಅಂಟುವುದಿಲ್ಲ. ನಮ್ಮ ಆಜ್ಞೆಯನ್ನು ಪಾಲಿಸಿದರೆ ನಿಮಗೆ ಯಾವುದೂ ಅಂಟುವುದಿಲ್ಲ.

## 'ಆಜ್ಞೆಯ' ಪಾಲನೆಯಿಂದ ನಿಜವಾದ ಪುರುಷಾರ್ಥ ಆರಂಭವಾಗುತ್ತದೆ

ನಾನು ನಿಮಗೆ ಜ್ಞಾನ ನೀಡಿದೆ ಎಂಬುದರ ಅರ್ಥ ಪ್ರಕೃತಿಯಿಂದ ಬೇರ್ಪಡಿಸಿದೆ ಎಂದು. 'ನಾನು ಶುದ್ಧಾತ್ಮ' ಎಂಬುದನ್ನು ಅರಿಯುವುದೇ ಪುರುಷಾರ್ಥ. ಐದು ಆಜ್ಞೆಗಳನ್ನು ಪಾಲಿಸಿ ಆ ಪುರುಷಾರ್ಥವನ್ನು ಸಾಧಿಸುವುದೇ ರಿಯಲ್ ಪುರುಷಾರ್ಥ.

**ಪ್ರಶ್ನಕರ್ತ:** ರಿಯಲ್ ಪುರುಷಾರ್ಥ ಮತ್ತು ರೆಲೆಟಿವ್ ಪುರುಷಾರ್ಥದ ನಡುವಿರುವ ವ್ಯತ್ಯಾಸವೇನು?

**ದಾದಾಶ್ರೀ:** ರಿಯಲ್ ಪುರುಷಾರ್ಥದಲ್ಲಿ ಮಾಡುವಂಥದ್ದು ಏನೂ ಇರುವುದಿಲ್ಲ. ಎರಡರ ನಡುವೆ ವ್ಯತ್ಯಾಸವೇನೆಂದರೆ – ರಿಯಲ್ ಪುರುಷಾರ್ಥವೆಂದರೆ 'ನೋಡುವುದು' ಮತ್ತು 'ಅರಿಯುವುದು' ಹಾಗು ರೆಲಿಟಿವ್ ಪುರುಷಾರ್ಥವೆಂದರೆ ಎಲ್ಲಾ ನಾನು ಮಾಡುತ್ತೇನೆ ಎಂದು ಭಾವಿಸಿಕೊಳ್ಳುವುದು ಅಥವಾ ಕಲ್ಪಿಸಿಕೊಳ್ಳುವುದು.

ನೀವು 'ಚಂದೂಭಾಯ್' ಆಗಿದ್ದುಕೊಂಡು ಪುರುಷಾರ್ಥಕ್ಕಾಗಿ ಪ್ರಯತ್ನಿಸುತ್ತಿದ್ದೀರಿ ಆದರೆ ಅದೊಂದು ಭ್ರಾಂತಿಯ ಪುರುಷಾರ್ಥ. ಆದರೆ 'ನಾನು ಶುದ್ಧಾತ್ಮ' ಎಂಬುದನ್ನು ಸಾಧಿಸಿಕೊಳ್ಳುವಲ್ಲಿ ಪುರುಷಾರ್ಥವನ್ನು ಮಾಡುತ್ತಾ, ದಾದಾರವರ ಐದು ಆಜ್ಞೆಗಳಲ್ಲಿ ಇದ್ದರೆ ಅದು ರಿಯಲ್ ಪುರುಷಾರ್ಥ. ಪುರುಷನಾಗಿ (ಪುರುಷ ಪದವು ಪ್ರಾಪ್ತಿಯಾದ ಬಳಿಕ) ಪುರುಷಾರ್ಥ ಮಾಡಿದ್ದೀರೆಂದು ಹೇಳಲಾಗುವುದು.

**ಪ್ರಶ್ನಕರ್ತ:** ಯಾವ ಜ್ಞಾನದ ಬೀಜವನ್ನು ನೀವು ಬಿತ್ತಿದ್ದೀರೋ ಅದೇ ಜ್ಯೋತಿಯೇ?

**ದಾದಾಶ್ರೀ:** ಅದೇ! ಆದರೆ ಈಗ ಬಿದಿಗೆಯ ರೂಪದಲ್ಲಿ ಇದೆ, ಇನ್ನು ಅದು ನಿಧಾನವಾಗಿ ಹುಣ್ಣಿಮೆಯಾಗುತ್ತದೆ. ಜಡ ಮತ್ತು ಚೇತನ ಎರಡೂ ಬೇರೆಬೇರೆಯಾಗಿವೆ, ಅಲ್ಲಿಂದಲೇ ಪುರುಷಾರ್ಥವು ನಿಜವಾಗಿ ಪ್ರಾರಂಭವಾಗುವುದು. ಆರಂಭವಾದ ಪುರುಷಾರ್ಥವು ಬಿದಿಗೆಯಿಂದ ಹುಣ್ಣಿಮೆಯನ್ನಾಗಿ ಮಾಡುತ್ತದೆ. ಹೌದು! ಈ ಆಜ್ಞೆಗಳ ಪಾಲನೆ ಮಾಡುವುದರಿಂದ ಅದು ಘಟಿಸುತ್ತದೆ. ಬೇರೆ ಇನ್ನೇನೂ ಮಾಡಬೇಕಾಗಿಲ್ಲ, ಕೇವಲ ಆಜ್ಞೆಯ ಪಾಲನೆ ಮಾಡಬೇಕು.

**ಪ್ರಶ್ನಕರ್ತ:** ದಾದಾ, ಪುರುಷರಾದ (ಶುದ್ಧಾತ್ಮದೊಂದಿಗೆ ತಾದಾತ್ಮ್ಯ ಹೊಂದಿದ) ನಂತರದ ಪುರುಷಾರ್ಥವನ್ನು ಸ್ವಲ್ಪ ವರ್ಣಿಸಿ. ಅಂತಹ ವ್ಯಕ್ತಿ ವ್ಯವಹಾರದಲ್ಲಿ ಹೇಗೆ ನಡೆದುಕೊಳ್ಳುತ್ತಾನೆ?

**ದಾದಾಶ್ರೀ:** ಇವರೆಲ್ಲಾ ಇದ್ದಾರಲ್ಲಾ, ಈ ನಮ್ಮ ಎಲ್ಲಾ ಮಹಾತ್ಮರೂ ಐದು ಆಜ್ಞೆಗಳಲ್ಲಿ ಇರುತ್ತಾರಲ್ಲವೇ! ಐದು ಆಜ್ಞೆಗಳೇ 'ದಾದಾ', ಅವುಗಳನ್ನು ಪಾಲಿಸುವುದೇ 'ರಿಯಲ್' ಪುರುಷಾರ್ಥವಾಗಿದೆ.

ಐದು ಆಜ್ಞೆಗಳನ್ನು ಪಾಲಿಸುವುದೇ ಪುರುಷಾರ್ಥವಾಗಿದೆ ಮತ್ತು ಐದು ಆಜ್ಞೆಗಳ ಪಾಲನೆಯ ಪರಿಣಾಮ ಏನಾಗುತ್ತದೆ? ಜ್ಞಾತಾ–ದ್ರಷ್ಟಾ ಸ್ಥಾನದಲ್ಲಿ (ತಿಳಿಯುವವನು–ನೋಡುವವನು) ಉಳಿದುಬಿಡುವುದು. ಮತ್ತು ನಮ್ಮನ್ನು ಯಾರಾದರೂ ನಿಜವಾದ ಪುರುಷಾರ್ಥವೇನೆಂದು ಕೇಳಿದರೆ? 'ಜ್ಞಾತಾ–ದ್ರಷ್ಟಾ' ಆಗಿರುವುದು ಎಂದು ನಾವು ಹೇಳುತ್ತೇವೆ. ಈ ಐದೂ ಆಜ್ಞೆಗಳು ಜ್ಞಾತಾ–ದ್ರಷ್ಟಾರಾಗಿ ಇರುವುದನ್ನು ಕಲಿಸುತ್ತವೆ ಅಲ್ಲವೇ? ಎಲ್ಲೇ ಆಗಲಿ

ಯಾರೇ ಆಗಲಿ ಶುದ್ಧ ಅಂತರಂಗದಿಂದ ಪುರುಷಾರ್ಥ ಆರಂಭಿಸಿದ್ದಾರೋ ಅವರ ಮೇಲೆ ನಮ್ಮ ಕೃಪೆಯ ಧಾರೆ ಹರಿಯುವುದು.

## 12. ಆತ್ಮಾನುಭವ ಮೂರು ಸ್ಟೇಜುಗಳಲ್ಲಿ, ಅನುಭವ–ಲಕ್ಷ್ಯ–ಪ್ರತೀತಿ

**ಪ್ರಶ್ನಕರ್ತ:** ಆತ್ಮಾನುಭವ ಆದಾಗ ಏನಾಗುತ್ತದೆ?

**ದಾದಾಶ್ರೀ:** ಆತ್ಮಾನುಭವ ಆಯಿತೆಂದರೆ ಅದರರ್ಥ, ದೇಹಾಧ್ಯಾಸ (ನಾನು ದೇಹವೆಂಬ ಭಾವನೆ) ಬಿಟ್ಟುಹೋದಂತೆ. ದೇಹಾಧ್ಯಾಸ ಬಿಟ್ಟುಹೋಯಿತೆಂದರೆ, ಕರ್ಮಬಂಧನಗಳು ನಿಂತುಹೋದಂತೆ. ಇದಕ್ಕಿಂತ ಹೆಚ್ಚು ಇನ್ನೇನು ಬೇಕು?

ಮೊದಲು 'ಚಂದೂಭಾಯ್' ಏನಾಗಿದ್ದರು ಮತ್ತು ಇಂದು 'ಚಂದೂಭಾಯ್' ಏನಾಗಿದ್ದಾರೆ ಎಂಬುದು ಅರ್ಥವಾಗುತ್ತಿದೆ. ಹಾಗಿದ್ದರೆ ಈ ಪರಿವರ್ತನೆ ಉಂಟಾದದ್ದು ಹೇಗೆ? ಆತ್ಮಾನುಭವದಿಂದ. ಮೊದಲು ದೇಹಾಧ್ಯಾಸದ ಅನುಭವವಿತ್ತು ಮತ್ತು ಈಗ ಆತ್ಮಾನುಭವವಿದೆ.

ಪ್ರತೀತಿ ಎಂದರೆ, ಎಲ್ಲಾ ನಂಬಿಕೆ ನೂರಕ್ಕೆ ನೂರರಷ್ಟು ಬದಲಾಗಿಬಿಟ್ಟಿದೆ ಮತ್ತು 'ನಾನು ಶುದ್ಧಾತ್ಮವೇ ಆಗಿದ್ದೇನೆ' ಎಂಬ ವಿಚಾರವೇ ಸಂಪೂರ್ಣವಾಗಿ ಒಪ್ಪಲ್ಪಟ್ಟಿದೆ. 'ನಾನು ಶುದ್ಧಾತ್ಮ' ಎಂಬ ಶ್ರದ್ಧೆ ಸ್ಥಿರವಾಗುತ್ತದೆ. ಆದರೆ ನಂತರದಲ್ಲಿ, ಶ್ರದ್ಧೆ ಹೊರಟುಹೋದರೂ ಪ್ರತೀತಿ ಹೋಗುವುದಿಲ್ಲ. ಶ್ರದ್ಧೆ ಬದಲಾಗುತ್ತದೆ ಆದರೆ ಪ್ರತೀತಿ ಬದಲಾಗುವುದಿಲ್ಲ.

ಪ್ರತೀತಿ ಎಂದರೆ, ಉದಾಹರಣೆಗೆ, ನಾನು ಇಲ್ಲಿ ಈ ಕೋಲನ್ನು ಇಟ್ಟು ಅದರ ಮೇಲೆ ಒತ್ತಡ ಹಾಕಿದರೆ, ಅದು ಬಾಗುತ್ತದೆ ಆದರೆ ತನ್ನ ಸ್ಥಾನವನ್ನು ಬಿಡುವುದಿಲ್ಲ. ಎಷ್ಟೇ ಕರ್ಮಗಳು ಉದಯಿಸಿದರೂ, ಕೆಟ್ಟ ಕರ್ಮಗಳು ಉದಯಿಸಿದರೂ ಪ್ರತೀತಿ ತನ್ನ ಸ್ಥಾನವನ್ನು ಬಿಡುವುದಿಲ್ಲ. 'ನಾನು ಶುದ್ಧಾತ್ಮ' ಎಂಬುದು ಮರೆಯಾಗುವುದಿಲ್ಲ.

ಅನುಭವ, ಲಕ್ಷ್ಯ ಮತ್ತು ಪ್ರತೀತಿ ಈ ಮೂರೂ ಇರುತ್ತವೆ. ಪ್ರತೀತಿ ಎಂದಿಗೂ ಇರುತ್ತದೆ. ಲಕ್ಷ್ಯ ಕೆಲವೊಮ್ಮೆ ಇರುತ್ತದೆ. ವ್ಯಾಪಾರ ಅಥವಾ ಇನ್ಯಾವುದೇ ಕೆಲಸ ಮಾಡುವಾಗ ಲಕ್ಷ್ಯ ತಪ್ಪಿಹೋಗಬಹುದು, ಮತ್ತು ಕೆಲಸ ಮುಗಿದ ಮೇಲೆ ಅದು ಹಿಂದಿರುಗಬಹುದು. ಹಾಗು ಅನುಭವವು ಯಾವಾಗ ಆಗುತ್ತದೆಂದರೆ, ಕೆಲಸದಿಂದ, ಎಲ್ಲದರಿಂದಲೂ ನಿವೃತ್ತರಾಗಿ ಏಕಾಂತದಲ್ಲಿ ಕುಳಿತುಕೊಂಡಾಗ ಅನುಭವದ ಸ್ವಾದವನ್ನು ಸವಿಯುವಿರಿ. ಹೀಗೆ ಅನುಭವವು ಹೆಚ್ಚುತ್ತಲೇ ಇರುತ್ತದೆ.

ಅನುಭವ, ಲಕ್ಷ್ಯ ಮತ್ತು ಪ್ರತೀತಿ. ಪ್ರತೀತಿ ಮುಖ್ಯವಾದುದು, ಅದು ಆಧಾರವಾಗಿದೆ. ಆಧಾರ ಸ್ಥಿರವಾದ ನಂತರ ಲಕ್ಷ್ಯ ಉಂಟಾಗುತ್ತದೆ. ಅದರ ನಂತರ 'ನಾನು ಶುದ್ಧಾತ್ಮ' ಎಂಬ ನಿರಂತರ ಅರಿವು ಇದ್ದೇ ಇರುತ್ತದೆ ಹಾಗು ಆರಾಮವಾಗಿ ಕುಳಿತಾಗ, ಜ್ಞಾತಾ-ದ್ರಷ್ಟಾ ಆಗಿ ಉಳಿದಾಗ ಅದು ಅನುಭವಕ್ಕೆ ಬರುತ್ತದೆ.

## 13. ಪ್ರತ್ಯಕ್ಷ ಸತ್ಸಂಗದ ಮಹತ್ವ

### ಸಮಸ್ಯೆಗಳ ಪರಿಹಾರಕ್ಕೆ ಸತ್ಸಂಗದ ಅವಶ್ಯಕತೆ

ಈ 'ಅಕ್ರಮ ವಿಜ್ಞಾನ' ಎಂಬ ಮಾಧ್ಯಮದ ಮೂಲಕ ನಿಮಗೂ ಆತ್ಮಾನುಭವವು ಪ್ರಾಪ್ತವಾಗಿದೆ. ಆದರೆ ಅದು ನಿಮಗೆ ಸಹಜವಾಗಿಯೇ ಪ್ರಾಪ್ತಿಯಾಗಿದೆ ಮತ್ತು ನಿಮಗೆ ಸ್ವತಃ ಲಾಭದಾಯಕವಾಗಿದೆ. ಇದರಿಂದ ಪ್ರಗತಿಯನ್ನು ಕೂಡಾ ಸಾಧಿಸಬಹುದಾಗಿದೆ. ಅದರಲ್ಲೂ ವಿಶೇಷವಾಗಿ 'ಜ್ಞಾನಿಯ' ಸಂಗದಲ್ಲಿದ್ದುಕೊಂಡು ಅದನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ.

ಈ ಜ್ಞಾನವನ್ನು ಬಹಳ ಆಳವಾಗಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ ಈ ಜ್ಞಾನವನ್ನು ಒಂದೇ ಗಂಟೆಯ ಅವಧಿಯೊಳಗೆ ನೀಡಲಾಗಿದೆ. ಇಷ್ಟೊಂದು ಮಹತ್ತಮವಾದ ಜ್ಞಾನ, ಒಂದು ಕೋಟಿ ವರ್ಷಗಳಲ್ಲೂ ಗಳಿಸಲಾಗದಂತಹ ಜ್ಞಾನವು ಕೇವಲ ಒಂದು ಗಂಟೆಯ ಅವಧಿಯಲ್ಲಿ ನೀಡಲ್ಪಡುತ್ತದೆ. ಆದರೆ ಬೇಸಿಕ್ (ಮೂಲಭೂತ) ಜ್ಞಾನ ಪ್ರಾಪ್ತಿ ಆಗಿರುತ್ತದೆ. ನಂತರ ವಿಸ್ತಾರವಾಗಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ ಅಲ್ಲವೇ? ಅದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ನೀವು ನನ್ನ ಬಳಿ ಕುಳಿತು ಕೇಳಿದರೆ ಆಗ ನಾನು ವಿವರಿಸಬಲ್ಲೆ. ಆದ್ದರಿಂದಲೇ ನಾವು ಹೇಳುವುದು, ಸತ್ಸಂಗದ ಅವಶ್ಯಕತೆ ಬಹಳವೇ ಇದೆ ಎಂದು. ಇಲ್ಲಿ ನೀವು ಸಂದೇಹದ ಗಂಟುಗಳನ್ನು ನಮ್ಮ ಮುಂದಿಟ್ಟಂತೆಲ್ಲಾ, ಒಳಗಿನ ಗಂಟುಗಳು ಬಿಡಿಸಿಕೊಳ್ಳುತ್ತಾ ಹೋಗುತ್ತವೆ. ಯಾರಿಗೆ ಅವುಗಳ ಗೊಂದಲವಿದೆಯೋ ಅವರೇ ಕೇಳಿದರೆ ಒಳಿತು.

### ಬೀಜ ಬಿತ್ತಿದ ನಂತರ ನೀರೆರೆಯುವುದು ಅವಶ್ಯಕ

**ಪ್ರಶ್ನಕರ್ತ:** ಜ್ಞಾನ ತೆಗೆದುಕೊಂಡ ನಂತರವೂ 'ನಾನು ಶುದ್ಧಾತ್ಮ' ಎಂದು ನೆನಪಿನಲ್ಲಿ ಇಡಬೇಕಾಗುತ್ತದೆ. ಅದು ಸ್ವಲ್ಪ ಕಷ್ಟ.

**ದಾದಾಶ್ರೀ:** ಇಲ್ಲ, ಅದು ಇದ್ದೇ ಇರುತ್ತದೆ. ನೆನಪಿನಲ್ಲಿ ಇಡಬೇಕಾಗಿಲ್ಲ, ತನ್ನಷ್ಟಕ್ಕೇ ಜ್ಞಾಪಕದಲ್ಲಿ ಇರುತ್ತದೆ. ಹಾಗೇನಾದರೂ ಅನ್ನಿಸಿದಲ್ಲಿ ಏನು ಮಾಡಬೇಕು? ಆಗ ಮತ್ತೆ ನಮ್ಮ ಬಳಿ ಬರುವುದು - ಹೋಗುವುದು ಮಾಡಬೇಕಾಗುತ್ತದೆ. ನೀಡಬೇಕಾದ ನೀರನ್ನು ನೀಡದಿದ್ದರೆ ಕಷ್ಟ ತಲೆದೋರುತ್ತದೆ. ನೀವು ವ್ಯಾಪಾರದ ಕಡೆ ಗಮನ ನೀಡದಿದ್ದರೆ ವ್ಯಾಪಾರ ಏನಾಗುತ್ತದೆ?

**ಪ್ರಶ್ನಕರ್ತ:** ಡೌನ್ ಆಗಿಬಿಡುತ್ತದೆ.

**ದಾದಾಶ್ರೀ:** ಇದರಲ್ಲೂ ಹಾಗೆಯೇ ಆಗುತ್ತದೆ. ಜ್ಞಾನ ಪಡೆದ ನಂತರ ಅದಕ್ಕೆ ನೀರನ್ನು ಹಾಕಬೇಕು, ಆಗಲೇ ಗಿಡ ಬೆಳೆಯುವುದು. ಗಿಡ ಚಿಕ್ಕದಾಗಿದ್ದರೂ ನೀರು ಹಾಕಬೇಕಾಗುತ್ತದೆ. ಆಗಾಗ, ಒಂದೋ ಎರಡೋ ತಿಂಗಳಿಗೆ ಒಮ್ಮೆ ಸ್ವಲ್ಪ ನೀರು ಹಾಕುತ್ತಿರಬೇಕು.

**ಪ್ರಶ್ನಕರ್ತ:** ಮನೆಯಲ್ಲಿ ನೀರನ್ನು ಹಾಕಿದರಾಗದೇ?

**ದಾದಾಶ್ರೀ:** ಇಲ್ಲ, ಮನೆಯಲ್ಲಿದ್ದು ಅದು ಸಾಧ್ಯವಿಲ್ಲ. ಅದು ಹೇಗೆ ಸಾಧ್ಯ? ಜ್ಞಾನಿ ಇಲ್ಲಿಯೇ ನಿಮ್ಮ ಬಳಿಗೆ ಬಂದಿರುವುದರಿಂದ ನಿಮಗೆ ಅವರ ಬೆಲೆ ಗೊತ್ತಾಗುತ್ತಿಲ್ಲ! ಶಾಲೆಗೆ ಹೋಗಿದ್ದೀರೋ ಅಥವಾ ಇಲ್ಲವೋ? ಎಷ್ಟು ವರ್ಷ ಹೋಗಿದ್ದೀರಿ?

**ಪ್ರಶ್ನಕರ್ತ ಪ್ರಶ್ನಕರ್ತ:** ಹತ್ತು ವರ್ಷಗಳು.

**ದಾದಾಶ್ರೀ:** ಹಾಗಿದ್ದರೆ ಅಲ್ಲಿ ಕಲಿತದ್ದೇನು? ಭಾಷೆ! ಈ ಆಂಗ್ಲ ಭಾಷೆ ಕಲಿಯಲು ಹತ್ತು ವರ್ಷ ಕಳೆದಿದ್ದೀರಿ ಎಂದಾದರೆ, ನನ್ನ ಬಳಿ ಆರು ತಿಂಗಳು ಕಳೆಯಿರಿ. ನನ್ನ ಹಿಂದೆ ಆರು ತಿಂಗಳಾದರೂ ಅಡ್ಡಾಡಿದರೆ, ಕೆಲಸ ಆಗಿ ಬಿಡುತ್ತದೆ.

## ನಿಶ್ಚಯ ಸ್ಟ್ರಾಂಗ್ ಆಗಿದ್ದರೆ ಅಡಚಣೆಗಳು ಮುರಿಯುತ್ತವೆ

**ಪ್ರಶ್ನಕರ್ತ:** ಹೊರಗಿನ ಪ್ರೋಗ್ರಾಮ್‌ಗಳು ನಿಶ್ಚಯವಾಗಿಬಿಟ್ಟಿವೆ, ಹೀಗಾಗಿ ಇಲ್ಲಿಗೆ ಬರುವುದು ಕಷ್ಟವಾಗುತ್ತದೆ.

**ದಾದಾಶ್ರೀ:** ನಿಮ್ಮ ಒಳಗಿನ ಭಾವನೆ ಸ್ಟ್ರಾಂಗ್ ಆಗಿದ್ದರೆ, ಅಡಚಣೆಗಳು ಮಾಯವಾಗುತ್ತವೆ. ನಮ್ಮೊಳಗಿನ ಭಾವನೆ ಸ್ಟ್ರಾಂಗ್ ಆಗಿದೆಯೋ ಅಥವಾ ದುರ್ಬಲವಾಗಿದೆಯೋ ಎಂಬುದನ್ನು ಗಮನಿಸಬೇಕಾಗುತ್ತದೆ.

## ಗ್ಯಾರಂಟಿ, ಸತ್ಸಂಗದಿಂದ ಸಂಸಾರದಲ್ಲಿ ಲಾಭ

ನನ್ನ ಬಳಿ ಎಲ್ಲಾ ರೀತಿಯ ವ್ಯಾಪಾರಿಗಳು ಬರುತ್ತಾರೆ. ಅದರಲ್ಲೂ ಕೆಲವರು ಅಂಗಡಿಗೆ ಒಂದು ಗಂಟೆ ತಡವಾಗಿ ಹೋದರೆ ಐನೂರು–ಸಾವಿರ ರೂಗಳಷ್ಟು ನಷ್ಟವಾಗುತ್ತದೆ ಎನ್ನುವಂತವರೂ ಬರುತ್ತಾರೆ. ಅವರಿಗೆ ನಾನೊಮ್ಮೆ ಹೇಳಿದೆ, 'ಇಲ್ಲಿಗೆ ಬಂದರೆ ಯಾವುದೇ ನಷ್ಟ ಉಂಟಾಗುವುದಿಲ್ಲ, ಆದರೆ ಬರುವಾಗ ರಸ್ತೆಯಲ್ಲಿ ಅರ್ಧ ಗಂಟೆ ಯಾವುದಾದರೂ ಅಂಗಡಿಯಲ್ಲಿ ನಿಂತರೆ ನಿಮಗೆ ನಷ್ಟವಾಗುತ್ತದೆ' ಎಂದು. ಇಲ್ಲಿಗೆ ಬಂದರೆ ಜವಾಬ್ದಾರಿ ನನ್ನದು. ಇಲ್ಲಿ ನನ್ನದು ಕೊಡುವ–ತೆಗೆದುಕೊಳ್ಳುವ ಯಾವುದೇ ವ್ಯಾಪಾರ ನಡೆಯುವುದಿಲ್ಲ. ನೀವು ಇಲ್ಲಿಗೆ ನಿಮ್ಮ ಆತ್ಮಕ್ಕೋಸ್ಕರ ಬಂದಿದ್ದೀರಿ. ಆದ್ದರಿಂದ ನಾನು ಎಲ್ಲರಿಗೂ ಹೇಳುವುದೇನೆಂದರೆ, ಇಲ್ಲಿಗೆ ಬಂದರೆ ಯಾವುದೇ ರೀತಿಯಲ್ಲಿ ನಿಮಗೆ ನಷ್ಟವಾಗುವುದಿಲ್ಲ.

## ದಾದಾರವರ ಸತ್ಸಂಗದ ಅಲೌಕಿಕತೆ

ಬಹಳ ತಾಪದಾಯಕ ಕರ್ಮಗಳು ಉದಯಿಸಿದಾಗ, ಇದು ಕಷ್ಟದ ಸಮಯ ಎಂದು ಅರ್ಥಮಾಡಿಕೊಂಡು ಶಾಂತಿಯಿಂದಿರಬೇಕು ಹಾಗೂ ಸತ್ಸಂಗದಲ್ಲಿಯೇ ಕಾಲಕಳೆಯಬೇಕು. ಇದೆಲ್ಲಾ (ಲೌಕಿಕ) ನಡೆಯುತ್ತಲೇ ಇರುತ್ತದೆ. ಯಾವ ಯಾವ ಕರ್ಮಗಳು ಉದಯಿಸುತ್ತವೋ ಹೇಳಲಾಗದು.

**ಪ್ರಶ್ನಕರ್ತ:** ಜಾಗೃತಿ ವಿಶೇಷವಾಗಿ ಹೆಚ್ಚಾಗಬೇಕೆಂದರೆ ಏನು ಮಾಡಬೇಕು?

**ದಾದಾಶ್ರೀ:** ಇನ್ನೇನಿಲ್ಲ, ಸತ್ಸಂಗದಲ್ಲಿರಿ ಅಷ್ಟೇ ಸಾಕು.

**ಪ್ರಶ್ನಕರ್ತ:** ನಿಮ್ಮ ಬಳಿ ಆರು ತಿಂಗಳು ಇದ್ದರೆ ಸ್ಥೂಲ ಪರಿವರ್ತನೆಯಾಗುತ್ತದೆ, ನಂತರ ಸೂಕ್ಷ್ಮ ಪರಿವರ್ತನೆಯಾಗುತ್ತದೆ ಎಂದು ಹೇಳಲಾಗುತ್ತದೆ ಹೌದಾ?

**ದಾದಾಶ್ರೀ:** ಹೌದು, ಸುಮ್ಮನೆ ನನ್ನ ಬಳಿ ಇದ್ದರೂ ಸಹ ಪರಿವರ್ತನೆಯಾಗುತ್ತಲೇ ಇರುತ್ತದೆ. ಹೀಗಾಗಿ ಇಲ್ಲಿಗೆ ಬರುತ್ತಿರಬೇಕು. ಎರಡು ಗಂಟೆ, ಮೂರು ಗಂಟೆ, ಐದು ಗಂಟೆ ಎಷ್ಟು ಸಮಯವಾದರೂ ಸರಿಯೇ. ಎಷ್ಟು ಜಮಾ ಮಾಡುತ್ತೇವೋ ಅಷ್ಟೂ ಲಾಭವೇ. ಜನ ಜ್ಞಾನ ತೆಗೆದುಕೊಂಡ ನಂತರ ತಿಳಿಯುತ್ತಾರೆ, 'ಇನ್ನು ನಾವು ಮಾಡಬೇಕಾದ್ದು ಏನೂ ಇಲ್ಲ' ಎಂದು! ಆದರೆ, ಇನ್ನೂ ಪರಿವರ್ತನೆಯಂತೂ ಶುರುವಾಗಿಯೇ ಇಲ್ಲ!

## ಜ್ಞಾನಿಯ ಸಾಮೀಪ್ಯದಲ್ಲೇ ಇರಬೇಕು

**ಪ್ರಶ್ನಕರ್ತ:** ಪೂರ್ಣಪದ ಪ್ರಾಪ್ತಿಗಾಗಿ ಮಹಾತ್ಮರು ಯಾವ ನಿಯಮವನ್ನು ಇರಿಸಿಕೊಳ್ಳಬೇಕು?

**ದಾದಾಶ್ರೀ:** ಎಷ್ಟು ಸಾಧ್ಯವೋ ಅಷ್ಟೂ, ಜೀವನವನ್ನು ಜ್ಞಾನಿಯ ಬಳಿ ಕಳೆಯಬೇಕು, ಅದೇ ನಿಯಮ, ಮತ್ತಿನ್ನೇನೂ ಇಲ್ಲ. ಹಗಲು-ರಾತ್ರಿ, ಎಲ್ಲೇ ಇದ್ದರೂ ಸರಿಯೇ, ದಾದಾರವರ ಹತ್ತಿರದಲ್ಲೇ ಇರಬೇಕು. ನಮ್ಮ ಮೇಲೆ ಅವರ (ಆತ್ಮಜ್ಞಾನಿಯ) ದೃಷ್ಟಿ ಬೀಳುವಂತೆ ಇರಬೇಕು.

ಇಲ್ಲಿ 'ಸತ್ಸಂಗ'ದಲ್ಲಿ ಕುಳಿತುಕೊಳ್ಳುವುದರಿಂದ ಕರ್ಮದ ಹೊರೆ ಕಡಿಮೆಯಾಗುತ್ತಾ ಹೋಗುತ್ತದೆ. ಆದರೆ, ಹೊರಗೆ ಕರ್ಮಗಳ ಜಾಲದ ಹೊರೆ ಹೆಚ್ಚುತ್ತಾ ಹೋಗುತ್ತದೆ. ಆ ಜಾಲವಂತೂ ನಮ್ಮನ್ನು ತನ್ನಲ್ಲಿ ಸಿಕ್ಕಿಕೊಂಡುಬಿಡುವಂತೆ ಮಾಡುತ್ತದೆ. ಎಷ್ಟು ಸಮಯ ನೀವು ಸತ್ಸಂಗದಲ್ಲಿ ಕುಳಿತುಕೊಳ್ಳುತ್ತೀರೋ ಅಷ್ಟು ಸಮಯದವರೆಗೆ ನಿಮಗೆ ಕೆಲಸಕಾರ್ಯದಲ್ಲಿ ಯಾವುದೇ ನಷ್ಟವಾಗುವುದಿಲ್ಲ ಎಂದು ನಾವು ಗ್ಯಾರಂಟಿ ನೀಡುತ್ತೇವೆ ಹಾಗು ಲೆಕ್ಕಾಚಾರ ಮಾಡಿ ನೋಡಿದರೆ ನಿಮಗೇ ತಿಳಿಯುತ್ತದೆ ಲಾಭವೇ ಆಗಿದೆಯೆಂದು. ಈ ಸತ್ಸಂಗ ಸಾಮಾನ್ಯ ವಿಷಯವೇ? ಆತ್ಮಕ್ಕಾಗಿ ಸಮಯವನ್ನು ತೆಗೆದಿರಿಸುವುದರಿಂದ ನಷ್ಟವಾಗುವುದಾದರೂ ಹೇಗೆ? ಕೇವಲ ಲಾಭವೇ ಆಗುತ್ತದೆ. ಆದರೆ ಈ ವಿಷಯ ಅರ್ಥವಾದಾಗ ಮಾತ್ರ ಕೆಲಸವಾಗುತ್ತದೆ. ಈ ಸತ್ಸಂಗದಲ್ಲಿ ಕುಳಿತುಕೊಳ್ಳುವುದು ಎಂದರೆ ಸುಮ್ಮನೆ ಸಮಯ ವ್ಯರ್ಥವಾದಂತೆ ಖಂಡಿತವಾಗಿಯೂ ಅಲ್ಲ. ಎಂಥಾ ಒಳ್ಳೆ ಸಮಯ ಬಂದಿದೆ! ಭಗವಾನರ (ಮಹಾವೀರ್ ಭಗವಾನ್) ಸಮಯದಲ್ಲಿ ಸತ್ಸಂಗಕ್ಕೆ ಹೋಗಬೇಕಿದ್ದರೆ ಕಾಲುನಡಿಗೆಯಿಂದಲೇ ಹೋಗಬೇಕಾಗಿತ್ತು! ಆದರೆ ಈಗಂತೂ ಬಸ್ ಅಥವಾ ರೈಲಿನಲ್ಲಿ ಕುಳಿತು ಬಹುಬೇಗನೇ ಸತ್ಸಂಗಕ್ಕೆ ಬರಲು ಸಾಧ್ಯವಿದೆ!!

## ಪ್ರತ್ಯಕ್ಷ ಸತ್ಸಂಗ ಸರ್ವಶ್ರೇಷ್ಠವಾದುದು

ಇಲ್ಲಿ ಕುಳಿತಿದ್ದರೆ ಸಾಕು, ಬೇರೇನೂ ಮಾಡದಿದ್ದರೂ ಸಹ ಪರಿವರ್ತನೆ ಆಗುತ್ತಲೇ ಇರುತ್ತದೆ. ಕಾರಣವೇನೆಂದರೆ, ಇದು ಸತ್ಸಂಗ; ಸತ್ ಎಂದರೆ ಆತ್ಮ, ಅದರ ಸಂಗ! ಈ ಪ್ರಕಟವಾದ ಸತ್- ಅದರ ಸಂಗದಲ್ಲಿ ಕುಳಿತರೆ, ಅಂತಿಮ ವಿಧದ ಸತ್ಸಂಗ ಎಂದು ಕರೆಯಲಾಗುತ್ತದೆ.

ಸತ್ಸಂಗದಲ್ಲೇ ಇರುವುದರಿಂದ ಬೇರೆ ಎಲ್ಲವೂ (ಸಾಂಸಾರಿಕ ಆಲೋಚನೆಗಳು) ಖಾಲಿಯಾಗಿ ಬಿಡುತ್ತವೆ. ಏಕೆಂದರೆ, ನಮ್ಮ ಜೊತೆ ಇರುವುದರಿಂದ, ನಮ್ಮನ್ನು

ನೋಡುವುದರಿಂದ, ನಮ್ಮ ಶಕ್ತಿಗಳು ಡೈರೆಕ್ಟ್ ಆಗಿ ನಿಮಗೆ ಪ್ರಾಪ್ತವಾಗುತ್ತವೆ, ಇದರಿಂದ ಜಾಗೃತಿ ಧಿಡೀರನೆ ಹೆಚ್ಚಾಗಿಬಿಡುತ್ತದೆ! ಹಾಗಾಗಿ ಆದಷ್ಟು ಸತ್ಸಂಗದಲ್ಲೇ ಇರುವಂತೆ ನೋಡಿಕೊಳ್ಳಿ. ಈ ಸತ್ಸಂಗದ ಒಟ್ಟಿಗೆ ಇದ್ದಿರೆಂದರೆ ನಿಮ್ಮ ಕೆಲಸವಾಯಿತು ಎಂದರ್ಥ.

ಕೆಲಸವಾಗುವುದು ಎಂದರೇನು? ಎಷ್ಟು ಹೆಚ್ಚು ಸಾಧ್ಯವೋ ಅಷ್ಟು ಹೆಚ್ಚು ದರ್ಶನ ಮಾಡಿ. ಎಷ್ಟು ಸಾಧ್ಯವೋ ಅಷ್ಟು ಮುಖಾಮುಖಿ ಪ್ರತ್ಯಕ್ಷ ಸತ್ಸಂಗದ ಲಾಭ ಪಡೆದುಕೊಳ್ಳಿ. ಇದು ಸಾಧ್ಯವಾಗದಿದ್ದಾಗ ಅದರ ಬಗ್ಗೆ ಪಶ್ಚಾತ್ತಾಪ ಪಡಬೇಕು! ಇಂತಹ ಜ್ಞಾನಿ ಪುರುಷರ ದರ್ಶನ ಮಾಡುವುದು ಮತ್ತು ಅವರ ಬಳಿ ಸತ್ಸಂಗದಲ್ಲಿ ಕುಳಿತುಕೊಳ್ಳುವುದು ಒಂದು ಮಹಾಭಾಗ್ಯ.

## 14. ದಾದಾರವರ ಪುಸ್ತಕ ಮತ್ತು ಮ್ಯಾಗಜಿನ್‌ಗಳನ್ನು ಓದುವುದರ ಮಹತ್ವ

### ಆಪ್ತವಾಣಿ, ಯಾವ ರೀತಿ ಪ್ರಯೋಜನಕಾರಿ!

ಇದು 'ಜ್ಞಾನಿ ಪುರುಷರ' ವಾಣಿ ಯಾವಾಗಲೂ ನವನವೀನ. ಇದು ಈಗಲೂ ಪರಿಣಾಮಕಾರಿ (ಪರ್ಯಾಯವಿದೆ). ಹಾಗಾಗಿ, ಇದನ್ನು ಓದುತ್ತಲೇ ನಿಮ್ಮ ತಿಳಿವಳಿಕೆಯ ಮಟ್ಟ (ಎಲ್ಲಾ ಪರ್ಯಾಯ) ಬದಲಾಗುತ್ತಾ ನಿಮ್ಮಲ್ಲಿ ಆನಂದವು ಉತ್ಪನ್ನವಾಗುತ್ತಾ ಹೋಗುವುದು. ಏಕೆಂದರೆ, ಇದು ವೀತರಾಗ ವಾಣಿ. ವಾಣಿಯು ರಾಗದ್ವೇಷರಹಿತವಾಗಿದ್ದರೆ ಮಾತ್ರ ಕೆಲಸವಾಗುತ್ತದೆ, ಇಲ್ಲದಿದ್ದರೆ ಆಗುವುದಿಲ್ಲ. ಭಗವಾನರ ವಾಣಿ ವೀತರಾಗವಾಗಿತ್ತು, ಆದ್ದರಿಂದಲೇ ಅದರ ಪ್ರಭಾವ ಇಂದಿಗೂ ಇದೆ. ಅದರಂತೆಯೇ ಜ್ಞಾನಿ ಪುರುಷರ ವಾಣಿಯೂ ಪ್ರಭಾವವನ್ನು ಬೀರುತ್ತದೆ. ವೀತರಾಗ ವಾಣಿಯ ಹೊರತು ಬೇರೆ ಯಾವುದೇ ಉಪಾಯವಿಲ್ಲ.

### ನೇರವಾದ ಪರಿಚಯವಾಗದಿದ್ದರೆ

**ಪ್ರಶ್ನಕರ್ತ:** ದಾದಾಜೀರವರ ಪ್ರತ್ಯಕ್ಷ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗದವರಿಗೆ ಪುಸ್ತಕಗಳು ಎಷ್ಟರ ಮಟ್ಟಿಗೆ ಸಹಾಯ ಮಾಡಬಲ್ಲವು?

**ದಾದಾಶ್ರೀ:** ಎಲ್ಲವೂ ಸಹಾಯ ಮಾಡುತ್ತವೆ. ಇಲ್ಲಿನ ಪ್ರತಿಯೊಂದು ವಸ್ತುಗಳು ದಾದಾರವರದ್ದೆ, (ಪುಸ್ತಕದಲ್ಲಿನ) ಶಬ್ದಗಳು, ಆಶಯಗಳು ದಾದಾರವರದ್ದೇ. ಎಲ್ಲವೂ ಸಹಾಯ ಮಾಡುತ್ತವೆ.

**ಪ್ರಶ್ನಕರ್ತ:** ಆದರೂ ನೇರವಾದ ಪರಿಚಯ ಮತ್ತು ಇದರಲ್ಲಿ ವ್ಯತ್ಯಾಸ ಇರುತ್ತದೆ ಅಲ್ಲವೇ?

**ದಾದಾಶ್ರೀ:** ವ್ಯತ್ಯಾಸ ಹುಡುಕಲು ಹೊರಟರೆ ಎಲ್ಲದರಲ್ಲೂ ವ್ಯತ್ಯಾಸ ಕಂಡುಬರುತ್ತದೆ. ಹೀಗಾಗಿ ಯಾವ ಸಮಯದಲ್ಲಿ ಯಾವುದು ಅನುಕೂಲವೋ ಅದನ್ನು ಮಾಡಬೇಕು. 'ದಾದಾ' ಇಲ್ಲವಾದಾಗ ಏನು ಮಾಡುತ್ತೀರ? ದಾದಾಜೀರವರ ಪುಸ್ತಕಗಳಿವೆ, ಅವುಗಳನ್ನು ಓದಿ. ಪುಸ್ತಕದಲ್ಲಿರುವವರೂ ದಾದಾಜೀ ಅವರೇ ಅಲ್ಲವೇ? ಅಷ್ಟೇಕೆ, ಕಣ್ಣು ಮುಚ್ಚಿಕೊಂಡರೆ ತಕ್ಷಣವೇ ದಾದಾಜೀ ಕಂಡುಬರುತ್ತಾರೆ!

## 15. ಐದು ಆಜ್ಞೆಯಿಂದ ಜಗತ್ತು ನಿರ್ದೋಷ

### ಜ್ಞಾನದ ನಂತರ ಪ್ರಾರಂಭ, ನಿಜದೋಷ ದರ್ಶನ

'ಸ್ವರೂಪಜ್ಞಾನ'ವಿಲ್ಲದೆ ತಪ್ಪುಗಳು ಕಂಡುಬರುವುದೇ ಇಲ್ಲ. ಏಕೆಂದರೆ, 'ನಾನೇ ಚಂದೂಭಾಯ್ ಆಗಿದ್ದೇನೆ ಮತ್ತು ನನ್ನಲ್ಲಿ ಯಾವುದೇ ದೋಷಗಳಿಲ್ಲ, ನಾನು ಬಲ್ಲವನು–ಬುದ್ಧಿವಂತ' ಎಂಬ ಭಾವನೆ ಇರುತ್ತದೆ. 'ಸ್ವರೂಪಜ್ಞಾನ'ವನ್ನು ಪಡೆದ ನಂತರ ನೀವು ನಿಷ್ಪಕ್ಷಪಾತಿ ಆಗುತ್ತೀರಿ, ಮನಸ್ಸು–ಮಾತು–ಕ್ರಿಯೆಯ ವಿಚಾರದಲ್ಲಿ ಯಾವುದೇ ಪಕ್ಷಪಾತ ಇರುವುದಿಲ್ಲ. ಆದ್ದರಿಂದ ನಿಮ್ಮ ಸ್ವಂತ ತಪ್ಪುಗಳು, ನಿಮಗೇ ಕಂಡುಬರುತ್ತವೆ.

ಯಾರಿಗೆ ತನ್ನ ಸ್ವಂತದ ತಪ್ಪುಗಳು ತಿಳಿಯುತ್ತವೋ, ಯಾರಿಗೆ ಪ್ರತಿಕ್ಷಣವೂ ತನ್ನ ತಪ್ಪು ಕಾಣುತ್ತದೆಯೋ, ಎಲ್ಲೆಲ್ಲಿ ತಪ್ಪುಗಳಿವೆಯೋ ಅವೆಲ್ಲಾ ಕಾಣುತ್ತವೆಯೋ, ಆತ ತಾನೇ 'ಪರಮಾತ್ಮ ಸ್ವರೂಪನಾಗಿ ಬಿಡುತ್ತಾನೆ'! 'ನಾನು ಚಂದೂಭಾಯ್ ಅಲ್ಲ, ನಾನು ಶುದ್ಧಾತ್ಮನಾಗಿದ್ದೇನೆ' ಎಂಬ ಅರಿವು ಮೂಡಿದ ನಂತರವೇ ನಿಷ್ಪಕ್ಷಪಾತಿಯಾಗಲು ಸಾಧ್ಯ. ಸಹಜವಾಗಿಯೇ ಬೇರೆಯವರ ದೋಷಗಳು ಕಾಣದೆ, ತನ್ನ ಎಲ್ಲಾ ದೋಷಗಳು ಕಂಡುಬರತೊಡಗಿದರೆ, ಆಗ ಆ ವ್ಯಕ್ತಿಯ ಕೆಲಸ ಪೂರ್ಣವಾಯಿತೆಂದು ಹೇಳಲಾಗುತ್ತದೆ. ತನ್ನಲ್ಲಿನ ದೋಷ ಕಂಡುಬರುತ್ತಿದೆ ಎಂದರೆ, ನಾವು ನೀಡಿದ ಜ್ಞಾನವು ಪರಿಣಾಮ ಬೀರುವುದನ್ನು ಆರಂಭಿಸಿದೆ ಎಂದರ್ಥ. ಯಾವಾಗ ತನ್ನಲ್ಲಿನ ದೋಷ ಕಂಡುಬರತೊಡಗುತ್ತದೋ, ಆಗ ಬೇರೆಯವರ ದೋಷಗಳು ಕಾಣುವುದಿಲ್ಲ. ಬೇರೆಯವರಲ್ಲಿ ದೋಷ ಕಾಣುವುದನ್ನು ಕೂಡಾ ಒಂದು ದೊಡ್ಡ ಅಪರಾಧ ಎಂದು ಪರಿಗಣಿಸಲಾಗುತ್ತದೆ.

ಈ ನಿರ್ದೋಷದ ಜಗತ್ತಿನಲ್ಲಿ ಯಾರೂ ದೋಷಿಗಳಲ್ಲ. ಇಲ್ಲಿ ದೋಷಾರೋಪಣೆ ಮಾಡುವುದಾದರೂ ಯಾರ ಮೇಲೆ? ಎಲ್ಲಿಯವರೆಗೆ ದೋಷ ಕಂಡುಬರುತ್ತದೋ

ಅಲ್ಲಿಯವರೆಗೆ ಅಹಂಕಾರವು ನಿರ್ಮೂಲವಾಗಿಲ್ಲವೆಂದರ್ಥ, ಅಹಂಕಾರ ನಾಶವಾಗುವವರೆಗೆ, ದೋಷಗಳನ್ನು ಸ್ವಚ್ಛಗೊಳಿಸುತ್ತಿರಬೇಕು.

ಈಗಲೂ ಯಾರಾದರೂ ದೋಷಿಗಳಾಗಿ ಕಂಡುಬಂದರೆ, ಅದು ನಮ್ಮದೇ ತಪ್ಪು. ಒಂದಲ್ಲ ಒಂದು ದಿನ, ದೋಷರಹಿತರನ್ನಾಗಿ ನೋಡಲೇಬೇಕಾಗುತ್ತದೆ ಅಲ್ಲವೇ? ಈ ಎಲ್ಲವೂ ನಮ್ಮದೇ ಹಳೆಯ ಅಕೌಂಟ್ ಎಂದು, ಸ್ವಲ್ಪ ಅರ್ಥ ಮಾಡಿಕೊಂಡರೂ, ಬಹಳ ಪ್ರಯೋಜನಕಾರಿಯಾಗುತ್ತದೆ.

## ಆಜ್ಞೆಯ ಪಾಲನೆಯಿಂದ ನಿರ್ದೋಷ ದೃಷ್ಟಿ ವೃದ್ಧಿಸುತ್ತದೆ

ನನಗೆ ಜಗತ್ತು ನಿರ್ದೋಷವಾಗಿ ಕಂಡುಬರುತ್ತದೆ. ನಿಮಗೂ ಆ ದೃಷ್ಟಿ ಬಂದರೆ, ಈ ಪಜಲ್ ಸಾಲ್ವ್ ಆಗಿಬಿಡುತ್ತದೆ. ನಾನು ನಿಮಗೆ ಅಂತಹ ಬೆಳಕು ನೀಡುತ್ತೇನೆ. ಅದರಿಂದ ಎಲ್ಲಾ ಪಾಪಗಳನ್ನು ತೊಳೆದುಬಿಟ್ಟರೆ, ನಿಮ್ಮಲ್ಲಿಯೂ ಆ ಬೆಳಕು ಉಳಿಯುವುದು. ಇದರಿಂದ ನಿಮಗೂ ಜಗತ್ತು ನಿರ್ದೋಷವೆಂದು ಕಂಡುಬರುತ್ತದೆ. ಜೊತೆಗೇ ನಾನು ಐದು ಆಜ್ಞೆಗಳನ್ನು ನೀಡುತ್ತೇನೆ. ಆ ಐದು ಆಜ್ಞೆಗಳಲ್ಲಿ ನೀವು ಇರುತ್ತೀರಾದರೆ, ಅವು ನಿಮಗೆ ನೀಡಲಾದಂತಹ ಜ್ಞಾನಕ್ಕೆ ಸ್ವಲ್ಪವೂ ಫ್ರಾಕ್ಚರ್ ಆಗಲು ಬಿಡುವುದಿಲ್ಲ.

## ಆಗಿನಿಂದಲೇ ಆದಿರಿ (ಸಮಕಿತ್) ಸಮಚಿತ್ತರು!

ಯಾವಾಗ ನಿಮಗೆ ನಿಮ್ಮ ಸ್ವಂತದ ದೋಷಗಳು ಕಾಣತೊಡಗುತ್ತವೋ ಆಗಿನಿಂದಲೇ ನೀವು ಸಮಕಿತ್ ಆಗಿದ್ದೀರೆಂದು ಹೇಳಲಾಗುತ್ತದೆ. ತನ್ನಲ್ಲಿನ ದೋಷ ಕಂಡುಬರಲು ಆರಂಭವಾದಾಗ, ತಿಳಿಯಬೇಕು ತಾನು ಜಾಗೃತನಾದೆನೆಂದು. ಇಲ್ಲದಿದ್ದರೆ ಆಗುತ್ತಿರುವುದೆಲ್ಲವೂ ನಿದ್ರೆಯಲ್ಲೇ ನಡೆದಿದೆ. ನಮ್ಮಲ್ಲಿನ ದೋಷಗಳು ಕೊನೆಗೊಂಡವೇ ಅಥವಾ ಇಲ್ಲವೇ ಎಂದು ಬಹಳ ಚಿಂತೆ ಮಾಡುವುದು ಮುಖ್ಯವಲ್ಲ, ಜಾಗೃತಿಯಲ್ಲಿ ಇರುವುದು ಮುಖ್ಯ. ಜಾಗೃತರಾದ ನಂತರ ಹೊಸ ದೋಷಗಳು ಎದ್ದುನಿಲ್ಲುವುದಿಲ್ಲ ಹಾಗು ಹಳೆಯ ದೋಷಗಳು ಹೊರಬರುತ್ತಾ ಹೋಗುತ್ತವೆ. ಅದು ಯಾವ ರೀತಿಯಿಂದ ದೋಷಗಳಾಗಿವೆ ಎಂದು, ನಾವು ಆ ದೋಷಗಳನ್ನು ನೋಡಬೇಕು.

## ದೋಷಗಳು ಎಷ್ಟು ಇರುತ್ತವೋ ಪಶ್ಚಾತ್ತಾಪವೂ (ಪ್ರತಿಕ್ರಮಣ) ಅಷ್ಟೇ ಇರಬೇಕು

ಅನಂತ ದೋಷಗಳನ್ನು ಮಾಡಿದ್ದೀರಾದರೆ, ಅಷ್ಟೇ ಪ್ರತಿಕ್ರಮಣವನ್ನು ಮಾಡಬೇಕಾಗುತ್ತದೆ. ಎಷ್ಟು ದೋಷಗಳನ್ನು ತುಂಬಿಸಿಕೊಂಡು ತಂದಿದ್ದೀರೋ, ಅವೆಲ್ಲಾ ನಿಮಗೆ ಕಾಣುತ್ತವೆ. ಜ್ಞಾನಿಪುರುಷರು ಜ್ಞಾನವನ್ನು ಕೊಟ್ಟ ನಂತರ, ನಮ್ಮೊಳಗಿನ ದೋಷಗಳು ನಮಗೆ ಕಾಣಲು ಆರಂಭವಾಗುತ್ತದೆ, ಇಲ್ಲದಿದ್ದರೆ ತನ್ನಲ್ಲಿನ ದೋಷಗಳು ತನಗೆ ಕಾಣುವುದಿಲ್ಲ, ಅದನ್ನೇ ಅಜ್ಞಾನವೆಂದು ಕರೆಯುವುದು. ತನ್ನಲ್ಲಿ ಒಂದೂ ದೋಷ ಕಾಣುವುದಿಲ್ಲ ಮತ್ತು ಬೇರೆಯವರಲ್ಲಿ ನೋಡಲು ಹೋದರೆ ಬಹಳಷ್ಟು ಕಂಡುಬರುತ್ತವೆ, ಇದನ್ನೇ ಕರೆಯುವುದು 'ಮಿಥ್ಯತ್ವ' ಎಂದು.

## ಸ್ವಂತದ ದೋಷಗಳೆಡೆಗೆ ದೃಷ್ಟಿ . . .

ಈ ಜ್ಞಾನವನ್ನು ಪಡೆದ ನಂತರ, ಮನದಲ್ಲಿ ಕೆಟ್ಟ ವಿಚಾರಗಳು ಬಂದರೆ, ಅವುಗಳೆಡೆಗೆ ನೋಡಿ, ಒಳ್ಳೆಯ ವಿಚಾರಗಳು ಬಂದರೆ ಅವುಗಳನ್ನು ನೋಡಿ. ಒಳ್ಳೆಯದರ ಬಗ್ಗೆ ರಾಗವೂ ಅಥವಾ ಕೆಟ್ಟದರ ಬಗ್ಗೆ ದ್ವೇಷವೂ ಬೇಡ. ಒಳ್ಳೆಯದೋ, ಕೆಟ್ಟದ್ದೋ ಎಂದು ನೋಡುವುದರ ಅಗತ್ಯ ನಮಗಿಲ್ಲ. ಏಕೆಂದರೆ ಮೂಲತಃ ಆಡಳಿತವೇ ನಮ್ಮ ಹಿಡಿತದಲ್ಲಿಲ್ಲ. ಹೀಗಾಗಿ ಜ್ಞಾನಿಗಳು ಏನನ್ನು ನೋಡುತ್ತಾರೆ? ಇಡೀ ಜಗತ್ತನ್ನು ನಿರ್ದೋಷದಿಂದ ನೋಡುತ್ತಾರೆ. ಏಕೆಂದರೆ ಇಲ್ಲಿ ಎಲ್ಲವೂ ಡಿಸ್ಚಾರ್ಜ್ ಆಗುತ್ತಿವೆ (ಕರ್ಮಗಳು ಫಲ ನೀಡುತ್ತಿವೆ), ಇದರಲ್ಲಿ ಆ ಬಡಪಾಯಿಯ ದೋಷವೇನು? ನಿಮ್ಮನ್ನು ಯಾರಾದರೂ ಬೈದರೆ, ಅದು 'ಡಿಸ್ಚಾರ್ಜ್ ಆಗಿದೆ'. 'ಬಾಸ್' ನಿಮ್ಮನ್ನು ಇಕ್ಕಟ್ಟಿನಲ್ಲಿ ಸಿಲುಕಿಸಿದರೆ, ಅದೂ ಕೂಡ ಡಿಸ್ಚಾರ್ಜ್ ಆಗಿದೆ. 'ಬಾಸ್' ಕೇವಲ ಒಂದು ನಿಮಿತ್ತವಾಗಿದ್ದಾರೆ. ಜಗತ್ತಿನಲ್ಲಿ ಯಾರದ್ದೂ ಯಾವುದೇ ತಪ್ಪಿಲ್ಲ. ಯಾವೆಲ್ಲಾ ದೋಷಗಳು ಕಂಡುಬರುತ್ತವೋ, ಅವು ತನ್ನ ಸ್ವಂತದ ತಪ್ಪುಗಳಾಗಿವೆ ಮತ್ತು ಅವೇ 'ಬ್ಲಂಡರ್ಸ್' ಆಗಿವೆ ಮತ್ತು ಅವುಗಳಿಂದಲೇ ಜಗತ್ತು ನಡೆಯುತ್ತಿರುವುದು. ದೋಷವನ್ನು ನೋಡುವಾಗ, ಉಲ್ಟಾ (ಸರಿಯಾದ ಅರಿವಿಲ್ಲದೆ) ನೋಡುವುದರಿಂದಲೇ ವೈರದ ಬಂಧನ ನಮ್ಮನ್ನು ಕಟ್ಟಿಹಾಕುವುದು.

ಜೈ ಸಚ್ಚಿದಾನಂದ್.

***

# ಅಡ್ಜಸ್ಟ್ ಎವ್‌ರಿವ್ಹೇರ್

## ಇದೊಂದು ಶಬ್ದವನ್ನು ಜೀರ್ಣಿಸಿಕೊಳ್ಳಿ

'ಅಡ್ಜಸ್ಟ್ ಎವ್‌ರಿವ್ಹೇರ್' ಎಂಬುದನ್ನು ನೀವು ನಿಮ್ಮ ಜೀವನದೊಳಗೆ ಅಳವಡಿಸಿಕೊಂಡುಬಿಟ್ಟರೆ ಬೇಕಾದಷ್ಟು ಆಯಿತು. ನಿಮಗೆ ಶಾಂತಿಯು ತಾನೇ ತಾನಾಗಿ ದೊರೆಯುತ್ತದೆ. ಈ ಕಲಿಯುಗದಂತಹ ಕೆಟ್ಟ ಕಾಲದಲ್ಲಿ ಅಡ್ಜಸ್ಟ್ ಆಗಲಿಲ್ಲವೆಂದರೆ, ಎಲ್ಲವೂ ಮುಗಿದಂತೆಯೇ!

ಸಂಸಾರದಲ್ಲಿ ಬೇರೇನೂ ತಿಳಿಯದೇ ಇದ್ದರೂ ಪರವಾಗಿಲ್ಲ ಆದರೆ ಅಡ್ಜಸ್ಟ್ ಆಗುವುದು ಹೇಗೆಂದು ಕಲಿತಿರಬೇಕು. ನಿಮ್ಮ ಎದುರಿನವರು 'ಡಿಸ್‌ಅಡ್ಜಸ್ಟ್' ಆಗುತ್ತಿದ್ದರೂ, ನೀವು ಅಡ್ಜಸ್ಟ್ ಆಗುತ್ತಾ ಮುಂದುವರೆದರೆ ಸಂಸಾರ–ಸಾಗರವನ್ನು ದಾಟಿ ದಡ ಮುಟ್ಟುತ್ತೀರಿ. ಯಾರಿಗೆ ಬೇರೆಯವರೊಂದಿಗೆ ಹೊಂದಿಕೊಂಡು ಹೋಗಲು ಸಾಧ್ಯವೋ, ಅವರಿಗೆ ದುಃಖವಾಗುವುದೇ ಇಲ್ಲ. 'ಅಡ್ಜಸ್ಟ್ ಎವೆರಿವ್ಹೇರ್'! ಪ್ರತಿಯೊಬ್ಬರೊಂದಿಗೂ ಅಡ್ಜಸ್ಟ್ ಮಾಡಿಕೊಂಡು ಹೋಗಬೇಕು, ಇದೇ ಎಲ್ಲಕ್ಕಿಂತಲೂ ದೊಡ್ಡ ಧರ್ಮ. ಈ ಕಾಲದಲ್ಲಂತೂ ಭಿನ್ನ–ಭಿನ್ನ ಸ್ವಭಾವಗಳಿರುತ್ತವೆ, ಆದ್ದರಿಂದ ಅಡ್ಜಸ್ಟ್ ಆಗದಿದ್ದರೆ ಹೇಗೆ ನಡೆಯುತ್ತದೆ?

ಈ ಐಸ್‌ಕ್ರೀಮ್ ತನ್ನಿಂದ ದೂರ ಇರು ಎಂದು ನಿಮಗೆ ಹೇಳುವುದಿಲ್ಲ. ನಿಮಗೆ ತಿನ್ನುವುದು ಬೇಡವಾಗಿದ್ದರೆ ತಿನ್ನಬೇಡಿ. ಆದರೆ ಈ ಹಿರಿಯರು ಅದನ್ನು ಕಂಡು ಕಿರಿಕಿರಿಗೊಳ್ಳುತ್ತಾರೆ. ಈ ಅಭಿಪ್ರಾಯ ಭೇದವಂತೂ ಯುಗ ಪರಿವರ್ತನೆಯ ಪರಿಣಾಮವಾಗಿದೆ. ಯುವ ಪೀಳಿಗೆಯವರಂತೂ ಕಾಲಕ್ಕೆ ತಕ್ಕಂತೆ ನಡೆಯುತ್ತಾರೆ.

ನಾವು ಏನು ಹೇಳುತ್ತೇವೆಂದರೆ, ಕಾಲಕ್ಕೆ ತಕ್ಕಂತೆ ಅಡ್ಜಸ್ಟ್ ಆಗಿಬಿಡಿ. ಮಗ ಒಂದು ಹೊಸ ಟೋಪಿ ಹಾಕಿಕೊಂಡು ಬಂದರೆ 'ಇಂಥದ್ದು ಏಕೆ, ಎಲ್ಲಿಂದ ತಂದೆ?' ಎಂದು ಕೇಳಬೇಡಿ. ಅದರ ಬದಲು ಅಡ್ಜಸ್ಟ್ ಆಗುತ್ತಾ 'ಇಷ್ಟು ಒಳ್ಳೆಯ ಟೋಪಿ ಎಲ್ಲಿಂದ ತಂದೆ? ಎಷ್ಟು ಕೊಟ್ಟೆ? ಹೆಚ್ಚು ದುಬಾರಿಯಿಲ್ಲವೇನೋ?' ಎಂದು ಕೇಳಿ, ಅಡ್ಜಸ್ಟ್ ಆಗುವುದು ಎಂದರೆ ಇದೇ.

ನಮ್ಮ ಧರ್ಮ ಏನು ಹೇಳುತ್ತದೆ ಎಂದರೆ, ಅನನುಕೂಲದಲ್ಲಿ ಅನುಕೂಲವನ್ನು ನೋಡೆಂದು. ರಾತ್ರಿ ನನಗೊಂದು ಆಲೋಚನೆ ಬಂದಿತು, "ಈ ಹೊದಿಕೆ ಕೊಳಕಾಗಿದೆ' ಎಂದು. ಆದರೆ ಆಗ ಅಡ್ಜಸ್ಟ್‌ಮೆಂಟ್ ಮಾಡಿಕೊಂಡ ಬಳಿಕ ಎಷ್ಟು ಸಮಾಧಾನ ಅನುಭವಕ್ಕೆ ಬಂತೆಂಬುದನ್ನು ಕೇಳಲೇಬೇಡಿ! ಪಂಚೇಂದ್ರಿಯಗಳ ಜ್ಞಾನವು ಅನನುಕೂಲವನ್ನು

ತೋರಿಸುತ್ತದೆ ಮತ್ತು ಆತ್ಮದ ಜ್ಞಾನವು ಅನುಕೂಲವನ್ನು ತೋರಿಸುತ್ತದೆ. ಆದ್ದರಿಂದ ಆತ್ಮದಲ್ಲಿರಿ.

ಇದು ಒಳ್ಳೆಯದು–ಕೆಟ್ಟದು ಎಂದು ಹೇಳುವುದರಿಂದ ಅವು ನಮ್ಮನ್ನು ಕಾಡುತ್ತವೆ. ನಾವಂತೂ ಎರಡನ್ನೂ ಸಮಾನವಾಗಿ ನೋಡಬೇಕಿದೆ. ಇದನ್ನು 'ಒಳ್ಳೆಯದು' ಎಂದು ಹೇಳಿದ್ದರಿಂದ, ಅದು 'ಕೆಟ್ಟದು' ಆಯಿತು. ಆಗ ಅದು ಕಾಡುತ್ತದೆ. ಸತ್ಯ ಹೇಳುವವರ ಜೊತೆ ಅಡ್ಜಸ್ಟ್ ಆಗಿಬಿಡಿ, ಸುಳ್ಳು ಹೇಳುವವರ ಜೊತೆಯೂ ಅಡ್ಜಸ್ಟ್ ಆಗಿಬಿಡಿ. ಯಾರಾದರೂ ನಮ್ಮನ್ನು ಕುರಿತು 'ನಿಮಗೆ ಬುದ್ಧಿ ಇಲ್ಲ' ಎಂದು ಹೇಳಿದರೆ, ನಾವು ತಕ್ಷಣವೇ ಅಡ್ಜಸ್ಟ್ ಆಗಿಬಿಡುತ್ತೇವೆ ಮತ್ತು ಅವರಿಗೆ ಹೇಳುತ್ತೇವೆ, 'ಅದಂತೂ ಮೊದಲಿನಿಂದಲೇ ಇರಲಿಲ್ಲ, ಈಗ ನಿನಗೆ ಹೇಗೆ ತಿಳಿಯಿತು? ಈ ವಿಷಯ ನಿನಗೆ ಇಂದು ತಿಳಿಯಿತು ಆದರೆ ನನಗಿದು ಬಾಲ್ಯದಿಂದಲೂ ತಿಳಿದಿದೆ' ಎಂದು. ಹೀಗೆ ಹೇಳಿದರೆ ರಗಳೆಯೇ ಇರದು ಅಲ್ಲವೇ? ಮತ್ತೆ ಆತ ಬುದ್ಧಿಯನ್ನು ಹುಡುಕುತ್ತಾ ನಮ್ಮ ಬಳಿ ಬರುವುದೇ ಇಲ್ಲ.

## ಪತ್ನಿಯೊಂದಿಗೆ ಅಡ್ಜಸ್ಟ್‌ಮೆಂಟ್

ಯಾವುದೋ ಕಾರಣದಿಂದ ನೀವು ಬರುವುದು ತಡವಾದಾಗ, ನಿಮ್ಮ ಪತ್ನಿ ಗೊಣಗಾಡತೊಡಗಿದರೆ, 'ಇಷ್ಟೊಂದು ತಡವಾಗಿ ಬಂದಿದ್ದೀರಾ, ನನಗೆ ಇದು ಸರಿ ಬರುವುದಿಲ್ಲ' ಇನ್ನೂ ಮುಂತಾದ ಮಾತುಗಳನ್ನು ಆಡತೊಡಗುತ್ತಾಳೆ. ಆಕೆ, ಸ್ವಲ್ಪ ಸುಮ್ಮನಾದ ನಂತರ ನೀವು ಹೇಳಿ, 'ಹೌದು, ನೀನು ಹೇಳುವುದು ಸರಿ, ಈಗಲೂ ನೀನು ಹೇಳಿದರೆ ಹಿಂದಿರುಗಿ ಹೊರಟುಹೋಗುತ್ತೇನೆ ಅಥವಾ ನೀನು ಹೇಳಿದರೆ ಒಳಗೆ ಬಂದು ಕುಳಿತುಕೊಳ್ಳುತ್ತೇನೆ'. ಆಗ ಅವಳು ಹೇಳುತ್ತಾಳೆ, 'ಇಲ್ಲ, ವಾಪಸ್ ಹೋಗಬೇಡಿ, ಸುಮ್ಮನೆ ಇಲ್ಲೇ ಮಲಗಿ' ಎಂದು. ಆಗ ನೀವು ಮತ್ತೆ ಕೇಳಿ, 'ನೀನು ಹೇಳಿದರೆ ಊಟ ಮಾಡುತ್ತೇನೆ, ಇಲ್ಲದಿದ್ದರೆ ಸುಮ್ಮನೆ ಮಲಗುತ್ತೇನೆ' ಎಂದು. ಆಗ ಆಕೆ ಹೇಳುತ್ತಾಳೆ 'ಹಾಗೆ ಮಾಡಬೇಡಿ, ಊಟ ಮಾಡಿ'. ಆಗ ಆಕೆ ಹೇಳಿದಂತೆ ನೀವು ಊಟ ಮಾಡಬೇಕು. ಅರ್ಥಾತ್ ಅಡ್ಜಸ್ಟ್ ಆದಿರಿ ಎಂದಾಯ್ತು. ಆಡ್ಜಸ್ಟ್ ಆದರೆ ಬೆಳಗ್ಗೆ ಫಸ್ಟ್ ಕ್ಲಾಸ್ ಚಹಾ ನೀಡುತ್ತಾಳೆ ಹಾಗು ಬೆದರಿಸಿದರೆ, ಮುಖ ಊದಿಸಿಕೊಂಡು ಚಹಾದ ಕಪ್ ತಂದು ಕುಕ್ಕುತ್ತಾಳೆ ಮತ್ತು ಅವಳ ಈ ನಡವಳಿಕೆ ಇನ್ನೂ ಮೂರು ದಿನಗಳ ಕಾಲ ಮುಂದುವರೆಯುತ್ತದೆ.

## ಭೋಜನದಲ್ಲಿ ಅಡ್ಜಸ್ಟ್‌ಮೆಂಟ್

ಯಾವುದರಲ್ಲಿ 'ಅಡ್ಜಸ್ಟ್ ಎವೆರಿವ್ಹೇರ್' ಆಗಿದೆಯೋ ಆ ವ್ಯವಹಾರವನ್ನು ನಿಭಾಯಿಸಲಾಗಿದೆ ಎಂದು ಕರೆಯಲಾಗುತ್ತದೆ! ಈಗಂತೂ ಡೆವಲಪ್‌ಮೆಂಟ್ ಕಾಲವಾಗಿದೆ. ಭಿನ್ನಾಭಿಪ್ರಾಯಗಳು ಹೆಚ್ಚಲು ಬಿಡಬೇಡಿ. ಆದ್ದರಿಂದಲೇ ನಾನು ಜನರಿಗೆ ಈ ಸೂತ್ರವನ್ನು ನೀಡಿರುವುದು, 'ಅಡ್ಜಸ್ಟ್ ಎವೆರಿವ್ಹೇರ್' ಎಂದು! ಊಟದಲ್ಲಿ ಸಾರಿಗೆ ಉಪ್ಪು ಕಡಿಮೆಯಾಗಿದ್ದರೆ, ಆಗ ದಾದಾ ಅಡ್ಜಸ್ಟ್ ಮಾಡಿಕೊಳ್ಳಲು ಹೇಳಿದ್ದಾರೆ ಎಂಬುದನ್ನು ನೆನಪಿಸಿಕೊಳ್ಳುತ್ತಾ, ಸಾರನ್ನು ಸೇವಿಸಿ ಹಾಗೇ ಉಪ್ಪಿನಕಾಯಿಯ ನೆಪಮಾಡಿ, ಸ್ವಲ್ಪ ಉಪ್ಪಿನಕಾಯಿ ತರಿಸಿಕೊಳ್ಳಿ. ಆದರೆ ಜಗಳವಾಡಬೇಡಿ. ಮನೆಯಲ್ಲಿ ಜಗಳವಾಗಬಾರದು. ನೀವು ಯಾವುದೇ ಸಂದರ್ಭದಲ್ಲಿ ಸಿಲುಕಿಕೊಂಡರೂ, ಅಡ್ಜಸ್ಟ್ ಮಾಡಿಕೊಳ್ಳಿ, ಆಗಲೇ ಸಂಸಾರ ಸುಂದರವೆನಿಸುವುದು.

## ಇಷ್ಟವಾಗದಿದ್ದರೂ, ನಿಭಾಯಿಸಲೇಬೇಕು

ನಿಮ್ಮೊಂದಿಗೆ ಯಾರೇ ಡಿಸ್‌ಅಡ್ಜಸ್ಟ್ ಆದರೂ, ನೀವು ಅವರೊಂದಿಗೆ ಅಡ್ಜಸ್ಟ್ ಮಾಡಿಕೊಳ್ಳಿ. ದೈನಂದಿನ ಜೀವನದಲ್ಲಿ ಅತ್ತೆ–ಸೊಸೆ ನಡುವೆ ಅಥವಾ ವಾರಗಿತ್ತಿಯರ ನಡುವೆ ಡಿಸ್‌ಅಡ್ಜಸ್ಟ್‌ಮೆಂಟ್ ಉಂಟಾದರೆ, ಯಾರಿಗೆ ಈ ಸಂಸಾರ ಸಾಗರದಿಂದ ಪಾರಾಗಬೇಕಿರುತ್ತದೋ ಅವರು ಅಡ್ಜಸ್ಟ್ ಮಾಡಿಕೊಳ್ಳಲೇಬೇಕಾಗುತ್ತದೆ. ಪತಿ–ಪತ್ನಿಯರ ನಡುವೆ ಯಾರೋ ಒಬ್ಬರು ಒಡಕು ಮೂಡಿಸಿದರೆ, ಮತ್ತೊಬ್ಬರು ಅದನ್ನು ಜೋಡಿಸಿಕೊಳ್ಳಬೇಕು, ಆಗಲೇ ಸಂಬಂಧ ನಿಭಾಯಿಸಲು ಸಾಧ್ಯವಾಗುವುದು ಮತ್ತು ಶಾಂತಿ ಇರುವುದು. ಈ ರೆಲೆಟಿವ್ (relative) ಸತ್ಯದ ವಿಚಾರದಲ್ಲಿ ಸ್ವಲ್ಪವೂ ಹಠ ಅಥವಾ ಆಗ್ರಹ ಮಾಡುವ ಅಗತ್ಯ ಇಲ್ಲ. ಮನುಷ್ಯನೆಂದು ಯಾರನ್ನು ಕರೆಯುತ್ತಾರೆ? ಯಾರು ಎವೆರಿವ್ಹೇರ್ ಅಡ್ಜಸ್ಟಬಲ್ ಆಗಿರುತ್ತಾರೋ ಅವರೇ ಮನುಷ್ಯರು.

## ಸುಧಾರಣೆ ಮಾಡುವುದೇ ಅಥವಾ ಅಡ್ಜಸ್ಟ್ ಮಾಡಿಕೊಳ್ಳುವುದೇ?

ಎಲ್ಲಾ ವಿಷಯದಲ್ಲೂ ನಾವು ಜೊತೆಗಿರುವ ವ್ಯಕ್ತಿಯೊಂದಿಗೆ ಅಡ್ಜಸ್ಟ್ ಮಾಡಿಕೊಂಡುಬಿಟ್ಟರೆ ಎಷ್ಟೊಂದು ಸರಳವಾಗಿಬಿಡುತ್ತದೆ! ನಾವು ನಮ್ಮೊಂದಿಗೆ ಏನನ್ನು ಒಯ್ಯುತ್ತೇವೆ? ಕೆಲವರು ಹೇಳಿಕೊಡುತ್ತಾರೆ, 'ಹೆಂಡತಿಯನ್ನು ಸ್ವಲ್ಪ ನೇರ ಮಾಡು' ಎಂದು. 'ಅರೇ ಆಕೆಯನ್ನು ನೇರ ಮಾಡಲು ಹೋದರೆ ನೀವು ವಕ್ರವಾಗುತ್ತೀರಿ'. ಆದ್ದರಿಂದ, ವೈಫ್

ಅನ್ನು ನೇರ ಮಾಡಲು ಹೋಗಬೇಡಿ, ಏನೇ ಹೇಳಿದರೂ ಕರೆಕ್ಟ್ ಎಂದು ಉತ್ತರಿಸಿಬಿಡಿ. ನಿಮ್ಮ ಮತ್ತು ಅವರ ಜೊತೆಗಾರಿಕೆ ಎಂದಿಗೂ ಇರುವಂತಿದ್ದರೆ ವಿಷಯ ಬೇರೆ ಇರುತ್ತಿತ್ತು, ಈ ಒಂದು ಜನ್ಮದ ನಂತರ ಎಲ್ಲಿ ಕಳೆದು ಹೋಗುತ್ತೇವೋ ಯಾರಿಗೆ ಗೊತ್ತು. ಇಬ್ಬರ ಮೃತ್ಯುವಿನ ಸಮಯ ಬೇರೆಬೇರೆ, ಇಬ್ಬರ ಕರ್ಮಗಳೂ ಬೇರೆಬೇರೆಯಾಗಿರುತ್ತವೆ! ಏನನ್ನೂ ತೆಗೆದು ಕೊಳ್ಳುವಂತಿಲ್ಲ – ಕೊಡುವಂತಿಲ್ಲ! ಇಲ್ಲಿಂದ ಆಕೆ ಎಲ್ಲಿಗೆ ಹೋಗುತ್ತಾಳೆ ಎಂಬುದಕ್ಕೆ ಏನು ಖಾತ್ರಿಯಿದೆ? ನೀವು ಆಕೆಯನ್ನು ನೇರ ಮಾಡಿದರೂ, ಮುಂದಿನ ಜನ್ಮದಲ್ಲಿ ಬೇರೆ ಯಾರ ಪಾಲಿಗೆ ಹೋಗುತ್ತಾಳೋ ಯಾರು ಬಲ್ಲರು!

ಆದ್ದರಿಂದ ನೀವು ಆಕೆಯನ್ನು ನೇರ ಮಾಡಬೇಡಿ, ಆಕೆಯೂ ನಿಮ್ಮನ್ನು ನೇರ ಮಾಡುವುದು ಬೇಡ. ಯಾವುದು ದೊರೆತಿದೆಯೋ ಅದು ಚಿನ್ನದಂತೆ ಎಂದು ಭಾವಿಸಬೇಕು. ಯಾರ ಸ್ವಭಾವವೂ ಎಂದೂ ನೇರವಾಗುವುದಿಲ್ಲ. ನಾಯಿಯ ಬಾಲ ಡೊಂಕಾಗಿಯೇ ಇರುತ್ತದೆ. ಆದ್ದರಿಂದ ನೀವು ಹುಷಾರಾಗಿ ನಡೆಯಿರಿ. ಹೇಗಿದೆಯೋ ಅದೇ ಸರಿ, 'ಅಡ್ಜಸ್ಟ್ ಎವ್‌ರಿವ್ಹೇರ್'.

## ವಕ್ರತೆಗೆ ಅಡ್ಜಸ್ಟ್ ಆಗಿಬಿಡಿ

ವ್ಯವಹಾರ ಹೇಗಿರಬೇಕೆಂದರೆ, ಅಡ್ಜಸ್ಟ್ ಆಗುವಂತಿರಬೇಕು ಹಾಗು ನೆರೆಹೊರೆಯವರು 'ಎಲ್ಲಾ ಮನೆಗಳಲ್ಲೂ ಜಗಳಗಳಾಗುತ್ತವೆ, ಆದರೆ ಈ ಮನೆಯಲ್ಲಿ ಜಗಳ ಆಗುವುದಿಲ್ಲ' ಎಂದು ಹೇಳಬೇಕು. ಎಲ್ಲಿ ಹೊಂದಾಣಿಕೆ ಆಗುವುದಿಲ್ಲವೋ ಅಲ್ಲಿಯೇ ಶಕ್ತಿಯನ್ನು ಅರಳಿಸಬೇಕು. ಅನುಕೂಲಕರವಾಗಿದ್ದರೆ ಅಲ್ಲಂತೂ ಶಕ್ತಿ ಇದ್ದೇ ಇರುತ್ತದೆ, ಪ್ರತಿಕೂಲವೆನಿಸಿದರೆ ಅದು ನಮ್ಮ ದುರ್ಬಲತೆಯೇ ಆಗಿರುತ್ತದೆ. ನನಗೆ (ಜ್ಞಾನಿಗೆ) ಎಲ್ಲರೊಂದಿಗೆ ಹೇಗೆ ಹೊಂದಾಣಿಕೆ ಇರುತ್ತದೆ? ಎಷ್ಟು ಅಡ್ಜಸ್ಟ್ ಮಾಡಿಕೊಳ್ಳುತ್ತೀರೋ ಶಕ್ತಿಗಳು ಅಷ್ಟೂ ಹೆಚ್ಚಾಗುತ್ತವೆ ಹಾಗು ಅಶಕ್ತಿ ಹೊರಟುಹೋಗುತ್ತದೆ. ಎಲ್ಲಾ ಉಲ್ಟಾ ಆಲೋಚನೆಗಳಿಗೆ ಬೀಗ ಬಿದ್ದಾಗಲಷ್ಟೇ ಸರಿಯಾದ ಅರಿವು ಮೂಡುವುದು.

ಮೃದು ಸ್ವಭಾವದವರೊಂದಿಗೆ ಯಾರು ಬೇಕಾದರೂ ಅಡ್ಜಸ್ಟ್ ಮಾಡಿಕೊಂಡುಬಿಡುತ್ತಾರೆ ಆದರೆ ವಕ್ರಬುದ್ಧಿಯ, ಕಠೋರವಾದ ಮತ್ತು ತೀವ್ರ ನಡತೆಗಳ ವ್ಯಕ್ತಿಗಳೊಂದಿಗೂ ಅಡ್ಜಸ್ಟ್ ಮಾಡಿಕೊಳ್ಳುವುದನ್ನು ನಾವು ಕಲಿತರೆ ನಮ್ಮ ಕೆಲಸವಾಗುತ್ತದೆ. ಸಿಡಿಮಿಡಿಗೊಂಡರೆ ನಡೆಯದು. ಸಂಸಾರದ ಯಾವ ವಸ್ತುವೂ ನಮಗೆ 'ಫಿಟ್' ಆಗುವುದಿಲ್ಲ,

ನಾವೇ ಅದರಲ್ಲಿ 'ಫಿಟ್' ಆದರೆ ಜಗತ್ತು ಸುಂದರವಾಗುತ್ತದೆ. ಜಗತ್ತನ್ನು 'ಫಿಟ್' ಮಾಡಲು ಹೋದರೆ ಆಗ ಅದು ವಕ್ರವಾಗುತ್ತದೆ. ಆದ್ದರಿಂದ ಅಡ್ಜಸ್ಟ್ ಎವ್‌ರಿವ್ಹೇರ್!

ನಿಮ್ಮ ಮುಂದಿರುವ ವ್ಯಕ್ತಿ ವಕ್ರಸ್ವಭಾವದವನಾದರೂ, ಅಗತ್ಯ ಬಿದ್ದಾಗ ನೀವು ಆತನನ್ನೂ ಒಪ್ಪಿಸಬೇಕು. ಸ್ಟೇಷನ್‌ನಲ್ಲಿ ಸಹಾಯಕ್ಕೆ ಕೂಲಿಯ ಅಗತ್ಯವಿದ್ದು, ಆತ ಹೆಚ್ಚು ಬೇಡಿಕೆ ಇಡತೊಡಗಿ ದರೆ, ನಾಲ್ಕು ಕಾಸು ಹೆಚ್ಚು ಕೊಟ್ಟಾದರೂ ಆತನನ್ನು ಒಪ್ಪಿಸಬೇಕಾಗುತ್ತದೆ, ಹಾಗೆ ಮಾಡದಿದ್ದರೆ ಆ ಬ್ಯಾಗ್ ಅನ್ನು ನಾವೇ ಖುದ್ದು ಹೊರಬೇಕಾಗುತ್ತದಲ್ಲವೇ!

## ದೂರು? ಬೇಡ, ಅಡ್ಜಸ್ಟ್ ಆಗಿ

ಮನೆಯಲ್ಲಿ ಸಹ 'ಅಡ್ಜಸ್ಟ್' ಆಗಬೇಕು. ಸತ್ಸಂಗದಿಂದ ನೀವು ತಡವಾಗಿ ಮನೆಗೆ ಹೋದರೆ ಮನೆಯವರು ಏನೆಂದು ಹೇಳುತ್ತಾರೆ? 'ಸ್ವಲ್ಪವಾದರೂ ಸಮಯದ ಕಡೆ ಗಮನ ನೀಡಬೇಕು' ಎಂದು. ಹಾಗಿದ್ದಾಗ, ನಾವು ಮನೆಗೆ ಬೇಗನೇ ಹೋಗುವುದರಲ್ಲಿ ತಪ್ಪೇನಿದೆ? ಈ ರೀತಿ ಬೈಗುಳಗಳನ್ನು ಕೇಳುವ ಸಮಯ ಬಂದದ್ದಾದರೂ ಏಕೆ? ಏಕೆಂದರೆ ಮೊದಲು ಬಹಳಷ್ಟು ಆರೋಪಗಳನ್ನು ಮಾಡಿದ್ದುದರ ಪರಿಣಾಮವಾಗಿ ಈಗ ಇಂಥಾ ಸಮಯ ಬಂದಿದೆ. ಆಗ ನಿಮ್ಮ ಕೈಯಲ್ಲಿ ಅಧಿಕಾರವಿತ್ತು, ಆಗ ನೀವು ಬಹಳಷ್ಟು ಮತ್ತೊಬ್ಬರ ಮೇಲೆ ಆರೋಪಮಾಡಿದ್ದಿರಿ. ಈಗ ಅಧಿಕಾರದಲ್ಲಿ ನೀವಿಲ್ಲ, ಹೀಗಾಗಿ ದೂರದೇ ಇರಬೇಕಾಗುತ್ತದೆ. ಆದ್ದರಿಂದ, ಈಗ ಪ್ಲಸ್–ಮೈನಸ್ ಮಾಡಿಬಿಡಿ. ಎದುರಿಗಿರುವ ವ್ಯಕ್ತಿ ಬೈಗುಳಗಳನ್ನು ನೀಡಿದರೆ, ಅದನ್ನು ಜಮಾ ಮಾಡಿಕೊಂಡುಬಿಡಿ. ಅಪೀಲುದಾರನಾಗುವುದೇ ಬೇಡ!

ಇಬ್ಬರೂ 'ಅಡ್ಜಸ್ಟ್' ಆಗಬೇಕೆಂದು ಮನೆಯಲ್ಲಿ ಪತಿ–ಪತ್ನಿ ನಿಶ್ಚಯಿಸಿಕೊಳ್ಳಬೇಕು, ಆಗ ಇಬ್ಬರ ಸಮಸ್ಯೆಗಳೂ ಪರಿಹಾರವಾಗುತ್ತವೆ. ಮತ್ತೊಬ್ಬ ವ್ಯಕ್ತಿ ಹೆಚ್ಚು ಜೋರಾಗಿ ಮಾತನಾಡಿದರೆ, ನೀವು 'ಅಡ್ಜಸ್ಟ್' ಮಾಡಿಕೊಂಡರೆ ಪರಿಹಾರ ದೊರೆತಂತಾಗುತ್ತದೆ. 'ಅಡ್ಜಸ್ಟ್ ಎವ್‌ರಿವ್ಹೇರ್' ಆಗಲಿಲ್ಲವೆಂದರೆ ಎಲ್ಲರೂ ಹುಚ್ಚರಾಗಿಬಿಡುತ್ತೀರಿ. ಎದುರಿನವರನ್ನು ಕೆಣಕಿದರೆ, ಅಲ್ಲಿಂದಲ್ಲೇ ಹುಚ್ಚುತನ ಆರಂಭವಾಗಿಬಿಡುತ್ತದೆ.

ಯಾರಿಗೆ 'ಅಡ್ಜಸ್ಟ್' ಆಗುವ ಕಲೆ ಸಿದ್ಧಿಸಿತೋ, ಅವರು ಈ ಜಗತ್ತಿನಿಂದ ಮೋಕ್ಷದೆಡೆ ತಿರುಗಿದಂತೆಯೇ. 'ಅಡ್ಜಸ್ಟ್‌ಮೆಂಟ್' ಆಯಿತೆಂದರೆ, ಅದರ ಹೆಸರೇ ಜ್ಞಾನ. ಯಾರು 'ಅಡ್ಜಸ್ಟ್‌ಮೆಂಟ್' ಕಲಿತರೋ, ಅವರು ದಡ ಮುಟ್ಟಿದಂತೆಯೇ.

ಕೆಲವು ಜನರಿಗೆ ರಾತ್ರಿ ತಡವಾಗಿ ಮಲಗುವ ಅಭ್ಯಾಸವಿರುತ್ತದೆ ಮತ್ತು ಕೆಲವರಿಗೆ ಬೇಗ ಮಲಗುವ ಅಭ್ಯಾಸವಿರುತ್ತದೆ, ಹಾಗಿದ್ದರೆ ಅಂತಹ ಇಬ್ಬರ ಜೊತೆಗಾರಿಕೆ ಹೇಗೆ ನಿಭಾಯಿಸುವುದು? ಪರಿವಾರದ ಸದಸ್ಯರೆಲ್ಲಾ ಒಟ್ಟಿಗೆ ಇರುವಾಗ ಏನಾಗುತ್ತದೆ? ಮನೆಯಲ್ಲಿ ಒಬ್ಬ ವ್ಯಕ್ತಿ 'ನಿಮಗೆ ಬುದ್ಧಿ ಕಡಿಮೆ' ಎಂದು ಹೇಳಿದರೆ, ಆತನ ಸ್ವಭಾವ ಅಂಥದ್ದನ್ನೇ ಹೇಳುವಂಥದ್ದು, ಎಂದು ನೀವು ಅರ್ಥ ಮಾಡಿಕೊಳ್ಳಬೇಕು ಮತ್ತು ನೀವೇ ಅಡ್ಜಸ್ಟ್ ಆಗಿಬಿಡಬೇಕು. ಹಾಗೆ ಮಾಡದೇ ನೀವು ಉತ್ತರ ನೀಡಿದರೆ ಶ್ರಮವಾಗುವುದು ನಿಮಗೆಯೇ. ಏಕೆಂದರೆ, ಆತನಂತೂ ನಿಮಗೆ ಬಂದು ತಗಲಿಸುತ್ತಾನೆ, ನೀವೂ ಆತನಿಗೆ ತಾಕಿಸಿಕೊಂಡು ಹೊಡೆದರೆ, ನಿಮಗೂ ಕಣ್ಣುಗಳಿಲ್ಲ ಎಂಬುದು ರುಜುವಾತಾಗಿ ಬಿಡುತ್ತದೆ ಅಲ್ಲವೇ!

ನಾನು ಸ್ವಭಾವಗಳನ್ನು ಗುರುತಿಸುತ್ತೇನೆ, ಆದ್ದರಿಂದ ನೀವು ಇಷ್ಟಪಟ್ಟರೂ ನನ್ನೊಂದಿಗೆ ಹಾಗಾಗಲು ನಾನು ಬಿಡುವುದಿಲ್ಲ, ನಾನು ತಪ್ಪಿಸಿಕೊಂಡುಬಿಡುತ್ತೇನೆ. ಇಲ್ಲದಿದ್ದರೆ ಇಬ್ಬರಿಗೂ ಆಕ್ಸಿಡೆಂಟ್ ಆಗುತ್ತದೆ ಮತ್ತು ಇಬ್ಬರ ಸ್ಪೇರ್‌ಪಾರ್ಟುಗಳು ಮುರಿದುಹೋಗುತ್ತವೆ. ಗಾಡಿಯ ಬಂಪರ್ ಮುರಿದುಹೋದರೆ, ಒಳಗೆ ಕುಳಿತಿರುವವರ ಸ್ಥಿತಿ ಏನಾಗಬೇಕು? ಕುಳಿತಿರುವವರಿಗೆ ಉಸಿರುಕಟ್ಟಿದಂತಾಗಿರುತ್ತದೆ ಅಲ್ಲವೇ! ಆದ್ದರಿಂದ ಸ್ವಭಾವವನ್ನು ಗುರುತಿಸಿ, ಮನೆಯಲ್ಲಿ ಎಲ್ಲರ ಸ್ವಭಾವಗಳನ್ನೂ ಅರಿತುಕೊಳ್ಳಬೇಕು.

ಈ ಘರ್ಷಣೆಗಳೇನೂ ಪ್ರತಿದಿನ ನಡೆಯುವುದಿಲ್ಲವಲ್ಲ! ಯಾವಾಗ ನಮ್ಮ ಕರ್ಮಗಳು ಉದಯವಾಗುವವೋ ಆಗ ಮಾತ್ರ ಅವು ಘಟಿಸುತ್ತವೆ. ಆ ಸಮಯದಲ್ಲಿ ನಾವು ಅಡ್ಜಸ್ಟ್ ಮಾಡಿಕೊಳ್ಳಬೇಕು. ಮನೆಯಲ್ಲಿ ಪತ್ನಿಯೊಂದಿಗೆ ಜಗಳವಾದರೆ, ನಂತರ ಆಕೆಯನ್ನು ಹೋಟೆಲ್‌ಗೆ ಕರೆದುಕೊಂಡು ಹೋಗಿ, ಊಟ ಮಾಡಿಸಿ ಸಂತೋಷಗೊಳಿಸಿಬಿಡಿ. ಕ್ಲೇಶವನ್ನು ಉಳಿಸಿಕೊಳ್ಳಬಾರದು.

ತಟ್ಟೆಯಲ್ಲಿ ಏನು ಬಡಿಸಿದರೂ ಅದನ್ನು ತಿನ್ನಿ. ಎದುರಿಗೆ ಏನು ಬರುತ್ತದೋ ಅದು ನಮ್ಮ ಸಂಯೋಗ. ಇದನ್ನು ಮಹಾವೀರ್ ಭಗವಾನ್ ಹೇಳಿದ್ದಾರೆ 'ಸಂಯೋಗವನ್ನು ತಳ್ಳಿದರೆ (ನೂಕಿದರೆ) ಅದರ ಪೆಟ್ಟು (ತಿರುಗೇಟು) ನಿನಗೇ ಬೀಳುವುದು!' ಆದುದರಿಂದ, ನಮಗೆ ಇಷ್ಟವಿಲ್ಲದ ಪದಾರ್ಥಗಳನ್ನು ಬಡಿಸಿದರೂ ಕೂಡ, ನಾವು ಅದನ್ನೇ ಸ್ವಲ್ಪ ತಿಂದರಾಯಿತು.

ಅಡ್ಜಸ್ಟ್ ಮಾಡಿಕೊಳ್ಳಲು ಬಾರದ ಮನುಷ್ಯನನ್ನು ಮನುಷ್ಯ ಎಂದು ಹೇಗೆ ಹೇಳುವುದು? ಸಂಯೋಗವನ್ನು ಒಪ್ಪಿಕೊಂಡು ಅಡ್ಜಸ್ಟ್ ಆಗುವಂಥವರ ಮನೆಯಲ್ಲಿ ಯಾವುದೇ ಸಮಸ್ಯೆಗಳು ಉಂಟಾಗುವುದಿಲ್ಲ. ಲಾಭ ಪಡೆದುಕೊಳ್ಳಬೇಕೆಂದಿದ್ದರೆ ಅಡ್ಜಸ್ಟ್

ಆಗಿಬಿಡಿ. ಹಾಗೆ ಮಾಡದೇ ಇದ್ದರೆ ಯಾವುದೇ ರೀತಿಯ ಲಾಭವಂತೂ ಇಲ್ಲ, ಬದಲಿಗೆ ವೈರವನ್ನು ಕಟ್ಟಿಕೊಳ್ಳಬೇಕಾಗುತ್ತದೆ.

ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಕೆಲವು ಸಿದ್ಧಾಂತಗಳಂತೂ ಇರಲೇಬೇಕು. ಆದರೂ ಸಂಯೋಗದ ಅನುಸಾರ ವರ್ತಿಸಬೇಕು. ಸಂಯೋಗದೊಂದಿಗೆ ಅಡ್ಜಸ್ಟ್ ಆಗುವವರೇ ಮನುಷ್ಯರು. ಪ್ರತಿಯೊಂದು ಸಂಯೋಗದಲ್ಲಿ ಅಡ್ಜಸ್ಟ್‌ಮೆಂಟ್ ಮಾಡಿಕೊಳ್ಳುವುದನ್ನು ಅರಿತುಕೊಂಡುಬಿಟ್ಟರೆ, ಅದು ನಿಮ್ಮನ್ನು ನೇರವಾಗಿ ಮೋಕ್ಷಕ್ಕೆ ಒಯ್ಯುವಂತಹ ಅದ್ಭುತ ಅಸ್ತ್ರವಾಗುತ್ತದೆ.

## ಡಿಸ್‌ಅಡ್ಜಸ್ಟ್‌ಮೆಂಟ್, ಇದೇ ಮೂರ್ಖತನ

ನಮ್ಮ ಮಾತು ಎದುರಿಗಿರುವವರಿಗೆ ಅಡ್ಜಸ್ಟ್ ಆಗುವಂತಿರಬೇಕು. ನಮ್ಮ ಮಾತಿಗೆ ಅಡ್ಜಸ್ಟ್ ಆಗಲು ಎದುರಿಗಿರುವವರಿಗೆ ಸಾಧ್ಯವಾಗದೇ ಇದ್ದರೆ ಅದು ನಮ್ಮದೇ ತಪ್ಪು. ತಪ್ಪನ್ನು ಸರಿಪಡಿಸಿಕೊಂಡರೆ 'ಅಡ್ಜಸ್ಟ್' ಆಗಿಬಿಡುತ್ತದೆ. ವೀತರಾಗಿಗಳಾದವರು ಹೇಳುವುದು 'ಎವ್‌ರಿವ್ಹೇರ್ ಅಡ್ಜಸ್ಟ್‌ಮೆಂಟ್' ಕುರಿತಾಗಿಯೇ. 'ಡಿಸ್‌ಅಡ್ಜಸ್ಟ್‌ಮೆಂಟ್' ಒಂದು ಮೂರ್ಖತನ. ಅಡ್ಜಸ್ಟ್‌ಮೆಂಟ್ ಅನ್ನು ನಾವು ನ್ಯಾಯ ಎಂದು ಹೇಳುತ್ತೇವೆ. ಆಗ್ರಹ–ದುರಾಗ್ರಹವನ್ನು ಎಲ್ಲಿಯೂ ನ್ಯಾಯವೆಂದು ಹೇಳಲಾಗದು.

ಇಲ್ಲಿಯವರೆಗೆ ಒಬ್ಬನೇ ಒಬ್ಬ ಮನುಷ್ಯ ಸಹ ನಮ್ಮೊಂದಿಗೆ ಡಿಸ್‌ಅಡ್ಜಸ್ಟ್ ಆಗಿಲ್ಲ ಮತ್ತು ಈ ಜನರು ಮನೆಯಲ್ಲಿನ ನಾಲ್ಕು ಸದಸ್ಯರೊಂದಿಗೆ ಅಡ್ಜಸ್ಟ್ ಆಗುವುದಿಲ್ಲ. ಅಡ್ಜಸ್ಟ್ ಆಗುವುದನ್ನು ಇನ್ನಾದರೂ ಕಲಿಯುತ್ತೀರೋ ಇಲ್ಲವೋ? ಇದು ಸಾಧ್ಯವೋ ಇಲ್ಲವೋ? ನಾವು ಏನನ್ನು ನೋಡುತ್ತೇವೋ ಅದನ್ನಂತೂ ನಾವು ಕಲಿತೇ ಕಲಿಯುತ್ತೇವಲ್ಲವೇ? ಈ ಜಗತ್ತಿನ ನಿಯಮವೇನೆಂದರೆ, ನೀವು ಏನನ್ನು ನೋಡುತ್ತೀರೋ ಅದನ್ನಂತೂ ನೀವು ಕಲಿತೇ ಕಲಿಯುತ್ತೀರಿ. ಇಲ್ಲಿ ಕಲಿಸಿಕೊಡಬೇಕಾದುದು ಏನೂ ಇಲ್ಲ.

ಸಂಸಾರದಲ್ಲಿ ಏನೂ ಕಲಿತಿರದಿದ್ದರೂ ಪರವಾಗಿಲ್ಲ, ಕೆಲಸ–ವ್ಯಾಪಾರ ಮಾಡಲು ಬರದಿದ್ದರೂ ಪರವಾಗಿಲ್ಲ, ಆದರೆ ಅಡ್ಜಸ್ಟ್ ಆಗುವುದನ್ನು ಕಲಿತಿರಬೇಕು. ಅಂದರೆ, ವಾಸ್ತವತೆಯೊಂದಿಗೆ ಅಡ್ಜಸ್ಟ್ ಮಾಡಿಕೊಳ್ಳುವುದನ್ನು ಕಲಿಯಬೇಕು. ಈ ಕಾಲದಲ್ಲಿ ಅಡ್ಜಸ್ಟ್ ಆಗುವುದು ಬರದಿದ್ದರೆ ಬಹಳವೇ ಕಷ್ಟಪಡಬೇಕಾಗುತ್ತದೆ. ಆದ್ದರಿಂದ 'ಅಡ್ಜಸ್ಟ್ ಎವ್‌ರಿವ್ಹೇರ್' ಆಗಿ ಕೆಲಸ ಮಾಡಿಕೊಳ್ಳಬೇಕಾಗಿದೆ.

*****

# ಘರ್ಷಣೆಗಳನ್ನು ತಪ್ಪಿಸಿ

## ಜಗಳವಾಡಲು ಹೋಗಬೇಡಿ

'ಯಾರೊಂದಿಗೂ ಜಗಳವಾಡಬೇಡಿ ಮತ್ತು ಜಗಳವಾಗುವಂತಹ ಸಂದರ್ಭಗಳನ್ನು ತಪ್ಪಿಸಿ'. ನಮ್ಮ ಈ ವಾಕ್ಯವನ್ನು ಆರಾಧಿಸಿದರೆ ನೇರವಾಗಿ ಮೋಕ್ಷಕ್ಕೆ ಹೋಗಿ ತಲುಪುತ್ತೀರಿ. ನಮ್ಮ ಒಂದೇ ಒಂದು ವಾಕ್ಯವನ್ನು ಯಾರಾದರೂ ಅರಿತುಕೊಂಡು ಪಾಲಿಸಿದರೆ ಸಾಕು ಅವರು ಮೋಕ್ಷಕ್ಕೆ ಹೋಗುತ್ತಾರೆ.

ನಮ್ಮ ಒಂದು ಶಬ್ದವನ್ನು ಒಂದು ದಿನವಾದರೂ ಪಾಲಿಸಿದರೆ ಅದ್ಭುತವಾದ ಶಕ್ತಿ ಉತ್ಪನ್ನವಾಗುತ್ತದೆ! ನಮ್ಮೊಳಗೆ ಎಷ್ಟೊಂದು ಶಕ್ತಿಗಳಿವೆಯೆಂದರೆ ಯಾರು ಹೇಗೇ ಜಗಳವಾಡಲು ಬಂದರೂ, ನಾವು ಅದರಿಂದ ತಪ್ಪಿಸಿಕೊಳ್ಳಬಹುದು.

ಏನೋ ತಪ್ಪಾಗಿ ನಿಮ್ಮೊಂದಿಗೆ ಯಾರಾದರೂ ಜಗಳವಾಡಿದರೆ, ಆಗ ಸಹಜತೆಯಿಂದ, ಆ ಘರ್ಷಣೆಯ ಪ್ರತಿಕ್ರಿಯೆಗಳು ಹೊರಬರದಂತೆ, ಸಮಾಧಾನದ ಮಾರ್ಗವನ್ನು ಕಂಡುಕೊಂಡು ಅದರಿಂದ ಪಾರಾಗಿ.

## ಟ್ರ್ಯಾಫಿಕ್ ನಿಯಮಗಳನ್ನು ಪಾಲಿಸುವುದರಿಂದ ಅಪಘಾತವನ್ನು ತಪ್ಪಿಸಬಹುದು

ಪ್ರತಿಯೊಂದು ಜಗಳದಲ್ಲಿ ಯಾವಾಗಲೂ ಇಬ್ಬರಿಗೂ ನಷ್ಟವಾಗುತ್ತದೆ. ಎದುರಿಗಿರುವವರಿಗೆ ನೀವು ದುಃಖ ಉಂಟು ಮಾಡುವುದರ ಜೊತೆಗೆ ನಿಮಗೂ ಅದೇ ಕ್ಷಣ ದುಃಖವಾಗದೇ ಇರದು. ಘರ್ಷಣೆಯು ಅಪಾಯಕಾರಿ ಎನ್ನುವುದನ್ನು ಟ್ರ್ಯಾಫಿಕ್ ನಿಯಮಗಳ ಉದಾಹರಣೆ ನೀಡುತ್ತಾ ನಿಮಗೆ ತಿಳಿಸುತ್ತಿದ್ದೇನೆ. ನೀವು ಮಾಡುವ ಅವಘಡಗಳಿಂದಾಗಿ ನಿಮಗೆ ಪ್ರಾಣಾಪಾಯವೂ ಸಂಭವಿಸಬಹುದು. ಆದ್ದರಿಂದಲೇ, ಯಾರೊಂದಿಗೂ ವ್ಯವಹಾರದ ಕೆಲಸ ಕಾರ್ಯಗಳಲ್ಲಿ ಘರ್ಷಣೆಗಳಿಗೆ ಒಳಪಡಬೇಡಿ.

ಯಾರಾದರೂ ಜಗಳವಾಡಲು ಬಂದರೆ, ಆ ವ್ಯಕ್ತಿಯ ಮಾತುಗಳು ಬಾಂಬುಗಳಂತೆ ಹೊರಬರುತ್ತಿದ್ದರೆ, ಆ ಘರ್ಷಣೆಯನ್ನು ತಪ್ಪಿಸಬೇಕೆಂದು ನೀವು ಅರ್ಥ ಮಾಡಿಕೊಳ್ಳಬೇಕು. ನಿಮ್ಮ ಮನಸ್ಸಿನ ಮೇಲೆ ಯಾವುದೇ ಪರಿಣಾಮವಾಗಬಾರದು, ಅಕಸ್ಮಾತ್ ಏನಾದರೂ ಪರಿಣಾಮ ಉಂಟಾದರೆ, ಎದುರಿಗಿರುವವರ 'ಮನಸ್ಥಿತಿಯ' ಪರಿಣಾಮ ನಮ್ಮ ಮೇಲೆ ಆಗುತ್ತಿದೆ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ನಾವು ಆ ಸಂದರ್ಭದಿಂದ ಮೆಲ್ಲನೆ ಜಾರಿಕೊಳ್ಳಬೇಕು. ಇದೆಲ್ಲವೂ ಘರ್ಷಣೆಗಳಿಂದಲೇ ಆಗಿದೆ. ಇದನ್ನು ಹೆಚ್ಚು ಹೆಚ್ಚು ಅರ್ಥ

ಮಾಡಿಕೊಂಡಂತೆಲ್ಲಾ, ಅವುಗಳ ಸಂಭವಿಸುವಿಕೆ ಕಡಿಮೆಯಾಗುತ್ತಾ ಹೋಗುತ್ತದೆ. ಘರ್ಷಣೆಗಳನ್ನು ತಪ್ಪಿಸಿದರೆ ಮೋಕ್ಷವು ಸಾಧ್ಯವಾಗುತ್ತದೆ.

ಘರ್ಷಣೆಗಳಿಂದಲೇ ಈ ಜಗತ್ತು ಸೃಷ್ಟಿಯಾಗಿರುವುದು. ಇದನ್ನು ಭಗವಾನ್ 'ವೈರದಿಂದ ಸೃಷ್ಟಿಯಾಗಿದೆ' ಎಂದು ಹೇಳುತ್ತಾರೆ. ಪ್ರತಿಯೊಬ್ಬ ಮನುಷ್ಯನಲ್ಲಿಯೂ, ಅಲ್ಲದೇ ಪ್ರತಿಯೊಂದು ಜೀವಿಯಲ್ಲಿಯೂ ವೈರಭಾವವಿದೆ. ಮಿತಿಯನ್ನು ದಾಟಿದಾಗಲಂತೂ, ಬೇರೆಯವರು ನಿಮ್ಮ ಬಗ್ಗೆ ಹಗೆತನವನ್ನು ಕಟ್ಟಿಕೊಳ್ಳದೆ ಇರುವುದಿಲ್ಲ. ಏನು ಬೇಕಾದರೂ ಆಗಲಿ, ಆದರೆ ಹಗೆತನವನ್ನು ಮಾತ್ರ ಬಿಡುವುದಿಲ್ಲ. ಏಕೆಂದರೆ ಎಲ್ಲರಲ್ಲೂ ಆತ್ಮವಿದೆ. ಆತ್ಮಶಕ್ತಿ ಎಲ್ಲರಲ್ಲೂ ಒಂದೇ ಸಮನಾಗಿದೆ.

ಘರ್ಷಣೆಗೊಳಗಾದ ಒಬ್ಬ ಮನುಷ್ಯನು ಈ ಶರೀರದ (ಪುದುಗಲ್) ದುರ್ಬಲತೆಯಿಂದಾಗಿ ಸೋತು ಸಹಿಸಿಕೊಳ್ಳಬೇಕಾಗಬಹುದು, ಆದರೆ ಸಹನೆ ಮಾಡಿಕೊಳ್ಳುವುದರ ಜೊತೆಗೆ ಅವನು ಹಗೆತನವನ್ನು ಇಟ್ಟುಕೊಳ್ಳದೇ ಇರುವುದಿಲ್ಲ. ಹೀಗಾಗಿ, ಮುಂದಿನ ಜನ್ಮದಲ್ಲಿ ಮತ್ತೆ ಅದೇ ವೈರ ಮರುಕಳಿಸುತ್ತದೆ!

ಯಾವುದೇ ಮನುಷ್ಯ ಬಹಳಷ್ಟು ಮಾತನಾಡಿದರೂ, ಹೇಗೇ ಮಾತನಾಡಿದರೂ, ನಾವು ಜಗಳ ಮಾಡಲು ಹೋಗಬಾರದು ಮತ್ತು ನಮ್ಮಿಂದ ಎದುರಿನವರಿಗೆ ತೊಂದರೆಯಾಗುವಂತೆ ಮಾತನಾಡುವುದು, ದೊಡ್ಡ ತಪ್ಪಾಗುತ್ತದೆ.

## ಸಹನೆ ಬೇಡ, ಪರಿಹಾರ ಕಂಡುಕೊಳ್ಳಿ

ಜಗಳವಾಗುವುದನ್ನು ತಪ್ಪಿಸುವುದು ಎಂದರೆ ಸಹಿಸಿಕೊಳ್ಳುವುದು ಎಂದಲ್ಲ. ಸಹಿಸಿಕೊಳ್ಳುವುದು ಎಂದರೆ ಎಷ್ಟು ಸಹಿಸಬಲ್ಲಿರಿ? ಸಹಿಸಿಕೊಳ್ಳುವುದು ಮತ್ತು 'ಸ್ಪ್ರಿಂಗ್' ಅನ್ನು ಒತ್ತುವುದು ಎರಡೂ ಒಂದೇ. 'ಸ್ಪ್ರಿಂಗ್ ಅನ್ನು ಎಷ್ಟು ಸಮಯದವರೆಗೆ ಒತ್ತಿ ಹಿಡಿಯಬಹುದು?' ಆದ್ದರಿಂದ, ಸಹಿಸಿಕೊಳ್ಳುವುದನ್ನು ಕಲಿಯುವುದೇ ಬೇಡ. ಪರಿಹಾರ ಕಂಡುಕೊಳ್ಳುವುದನ್ನು ಕಲಿಯಿರಿ. ಅಜ್ಞಾನದ ಅವಸ್ಥೆಯಲ್ಲಿ ಸಹಿಸಿಕೊಳ್ಳಲೇಬೇಕಾಗುತ್ತದೆ. ನಂತರ ಒಂದು ದಿನ 'ಸ್ಪ್ರಿಂಗ್' ಮೇಲೆ ಹಾರಿದರೆ, ಎಲ್ಲವನ್ನೂ ಅಸ್ತವ್ಯಸ್ತಗೊಳಿಸುತ್ತದೆ.

ಇನ್ನೊಬ್ಬರ ನಿಮಿತ್ತದಿಂದ ಏನನ್ನಾದರೂ ಸಹಿಸಿಕೊಳ್ಳಬೇಕಾದ ಸಂದರ್ಭ ಬಂದರೆ, ಅದು ನಮ್ಮದೇ ಲೆಕ್ಕಾಚಾರವಾಗಿರುತ್ತದೆ. ಆದರೆ ಇದು ಯಾವ ಲೆಕ್ಕದ ಪುಸ್ತಕಕ್ಕೆ

ಸಂಬಂಧಪಟ್ಟಿದ್ದು ಮತ್ತು ಎಲ್ಲಿನ ಮಾಲು ಎಂಬುದು ನಿಮಗೆ ತಿಳಿದಿರುವುದಿಲ್ಲ, ಹೀಗಾಗಿ ಹೊಸ ಮಾಲು ಬರಲು ಆರಂಭವಾಗಿದೆ ಎಂದು ತಿಳಿಯುತ್ತೇವೆ. ಯಾವುದೇ ಹೊಸ ಮಾಲನ್ನು ಯಾರೂ ನೀಡುತ್ತಿಲ್ಲ, ಕೊಟ್ಟಿದ್ದೇ ವಾಪಸ್ ಬರುತ್ತದೆ. ಈಗ ಬರುತ್ತಿರುವುದು ನನ್ನದೇ ಕರ್ಮದ ಉದಯದಿಂದ ಬಂದಿದೆ, ಎದುರಿಗಿರುವವರು ಕೇವಲ ನಿಮಿತ್ತ ಮಾತ್ರ.

## ಜಗಳಗಳಾಗುವುದು ನಮ್ಮದೇ ತಪ್ಪಿನಿಂದ

ಈ ಜಗತ್ತಿನಲ್ಲಿ ಯಾವುದೇ ಜಗಳವಾದರೂ ಅದರಲ್ಲಿ ನಿಮ್ಮದೇ ತಪ್ಪಿರುತ್ತದೆ, ಎದುರಿಗಿರುವವರದ್ದು ಯಾವುದೇ ತಪ್ಪಿರುವುದಿಲ್ಲ! 'ನೀವೇಕೆ ಜಗಳವಾಡುತ್ತಿದ್ದೀರಿ?' ಎಂದು ಕೇಳಿದಾಗ, 'ಎದುರಿಗಿದ್ದವನೇ ಜಗಳ ಪ್ರಾರಂಭಿಸಿದ!' ಎಂಬ ಪ್ರತ್ಯುತ್ತರ ಬಂದರೆ, ನೀವೂ ಕುರುಡರು ಆತನೂ ಕುರುಡ ಎಂದಾಯಿತು. ನೀವು ಆಲೋಚಿಸಬೇಕು, 'ನಾನು ಮನಸ್ತಾಪ ಉಂಟು ಮಾಡುವಂಥದ್ದೇನನ್ನು ಹೇಳಿದೆ' ಎಂದು. ನಮ್ಮ ತಪ್ಪು ನಮಗೆ ತಿಳಿದರೆ ಪರಿಹಾರ ಕಂಡುಬರುತ್ತದೆ. ನಂತರ ಪಜಲ್ ಸಾಲ್ವ್ ಆಗಿಬಿಡುತ್ತದೆ. ಇಲ್ಲದಿದ್ದರೆ, ಎಲ್ಲಿಯವರೆಗೆ ನಾವು ಎದುರಿಗಿರುವವರ ತಪ್ಪನ್ನು ನೋಡಹೋಗುತ್ತೇವೆಯೋ, ಅಲ್ಲಿಯವರೆಗೆ ಪಜಲ್ ಸಾಲ್ವ್ ಆಗುವುದೇ ಇಲ್ಲ. 'ನನ್ನದೇ ತಪ್ಪು' ಎಂದು ಒಪ್ಪಿಕೊಂಡರೆ ಮಾತ್ರ ಸಂಸಾರವು ಕೊನೆಗೊಳ್ಳುತ್ತದೆ. ಇಲ್ಲವಾದಲ್ಲಿ, ಬೇರೆ ಯಾವುದೇ ಉಪಾಯವಿಲ್ಲ. ಯಾರ ಜೊತೆಯಲ್ಲೇ ಆಗಲಿ ಮನಸ್ತಾಪ ಉಂಟಾದರೆ, ಅದು ನಮ್ಮಲ್ಲಿರುವ ಅಜ್ಞಾನದ ಸಂಕೇತವಾಗಿರುತ್ತದೆ.

ಎಲ್ಲಿಯಾದರು ಒಬ್ಬ ಹುಡುಗ, ನಿಮಗೆ ಕಲ್ಲು ಹೊಡೆದು ರಕ್ತ ಬಂದರೆ, ಆಗ ಆ ಹುಡುಗನ ಬಗ್ಗೆ ಏನು ಮಾಡುತ್ತೀರಿ? ಆ ಹುಡುಗ ತನ್ನಿಂದ ಎಂಥಾ ಅನಾಹುತವಾಯಿತು ಎಂದು ಪಶ್ಚಾತ್ತಾಪ ಪಡುತ್ತಿದ್ದರೂ, ಅವನ ಮೇಲೆ ಕೋಪ ಮಾಡಿಕೊಳ್ಳುತ್ತೀರಿ. ಆದರೆ, ಅದೇ ನೀವು ಹೋಗುತ್ತಿರುವಾಗ ಬೆಟ್ಟದ ಮೇಲಿನಿಂದ ಕಲ್ಲು ಬಿದ್ದು, ಅದು ನಿಮಗೆ ತಗಲಿ ರಕ್ತ ಬಂದರೆ, ಆಗ ಏನು ಮಾಡುತ್ತೀರಿ? ಕೋಪ ಮಾಡಿಕೊಳ್ಳುತ್ತೀರಾ? ಇಲ್ಲ. ಅದಕ್ಕೆ ಕಾರಣವೇನು? ಅದು ಬೆಟ್ಟದಿಂದ ಬಿದ್ದಿದೆ. ಬೆಟ್ಟದಿಂದ ಬಿದ್ದದ್ದನ್ನು ಬೀಳಿಸಿದವರು ಯಾರು?

## ವಿಜ್ಞಾನ, ಅರ್ಥಮಾಡಿಕೊಳ್ಳುವಂಥದ್ದು

**ಪ್ರಶ್ನಕರ್ತ:** ನಮಗೆ ಕ್ಲೇಶದಲ್ಲಿ ಸಿಲುಕಲು ಇಷ್ಟವಿರುವುದಿಲ್ಲ, ಆದರೂ ಎದುರಿನ ವ್ಯಕ್ತಿ ಜಗಳವಾಡಲು ಆರಂಭಿಸಿದರೆ, ಏನು ಮಾಡುವುದು?

**ದಾದಾಶ್ರೀ:** ಈ ಗೋಡೆಯೊಂದಿಗೆ ಯಾರಾದರೂ ಜಗಳವಾಡಲು ಹೊರಟರೆ ಎಷ್ಟು ಸಮಯದವರೆಗೆ ಕಾದಾಡಲು ಸಾಧ್ಯ? ಗೋಡೆಯೊಂದಿಗೆ ಒಂದು ದಿನ ತಲೆ ಹೊಡೆದುಕೊಂಡರೆ, ಆಗ ನಾವು ಅದರೊಂದಿಗೆ ಏನು ಮಾಡಬೇಕು? ತಲೆ ಹೊಡೆಯಿತು ಅಂತ ನಾವು ಗೋಡೆಯೊಂದಿಗೆ ಜಗಳವಾಡಬೇಕಾ? ಅದೇ ರೀತಿ, ಬಹಳ ಕ್ಲೇಶ ಉಂಟು ಮಾಡುವಂತಹ ಜನರು ಗೋಡೆಗಳ ಹಾಗೆ! ಇದರಲ್ಲಿ ಎದುರಿಗಿರುವವರನ್ನು ನೋಡಲು ಏನೂ ಉಳಿದಿಲ್ಲ, ಅವರು ಗೋಡೆಗಳಂತೆ ಎಂದು ನೀವೇ ಅರ್ಥ ಮಾಡಿಕೊಳ್ಳಬೇಕು; ಆಗ ಏನೂ ಕಷ್ಟ ಇರುವುದಿಲ್ಲ.

ಆ ಗೋಡೆಗೆ ಬೈಯುವ ಅಧಿಕಾರ ನಿಮಗಿದೆಯೇ? ಅದೇ ರೀತಿ ಎದುರಿನ ವ್ಯಕ್ತಿಯೂ ಸಹ. ಅವರು ಒಂದು ನಿಮಿತ್ತರಾಗಿ ಜಗಳವಾಡುತ್ತಾರೆ. ಅವರಂತೂ ಜಗಳವಾಡದೆ ಬಿಡುವುದಿಲ್ಲ, ಅವರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅವರ ಕೈಯಲ್ಲಿ ಅಧಿಕಾರವಂತೂ ಇಲ್ಲವೇ ಇಲ್ಲ. ಹಾಗಿದ್ದಲ್ಲಿ, ಸುಮ್ಮನೆ ವ್ಯರ್ಥವಾಗಿ ಗಲಾಟೆ ಮಾಡುವುದರಿಂದಾಗುವ ಪ್ರಯೋಜನವಾದರೂ ಏನು? ಆದ್ದರಿಂದಲೇ ನೀವೂ ಗೋಡೆಯಂತೆ ಆಗಿಬಿಡಿ! ನೀವು ಹೆಂಡತಿಯನ್ನು ಬೈಯುತ್ತಾ ಇರುತ್ತೀರಿ, ಆದರೆ ಆಕೆಯೊಳಗಿರುವ ಭಗವಂತ, ನನ್ನನ್ನು ಬೈಯುತ್ತಿದ್ದಾನೆ ಎಂಬುದನ್ನು ಗಮನಿಸುತ್ತಿರುತ್ತಾರೆ. ಆಕೆ ನಿಮ್ಮನ್ನು ಬೈದರೆ, ನೀವು ಗೋಡೆಯಂತೆ ಆಗಿಬಿಡಿ. ಹಾಗಾದಾಗ, ನಿಮ್ಮೊಳಗಿರುವ ಭಗವಂತ ನಿಮಗೆ ಸಹಾಯ ಮಾಡುತ್ತಾರೆ.

ಯಾರೊಂದಿಗಾದರೂ ಭಿನ್ನಾಭಿಪ್ರಾಯ ಉಂಟಾಗುವುದು ಮತ್ತು ಗೋಡೆಗೆ ಗುದ್ದುವುದು, ಈ ಎರಡೂ ಸಮಾನವೇ. ಈ ಎರಡರಲ್ಲೂ ಭೇದವಿಲ್ಲ. ಯಾರು ಗೋಡೆಗೆ ಹೋಗಿ ಗುದ್ದುತ್ತಾರೋ, ಅದು ಅವರಿಗೆ ಕಾಣದ ಕಾರಣದಿಂದ ಗುದ್ದುತ್ತಾರೆ. ಹಾಗೆಯೇ, ಭಿನ್ನಾಭಿಪ್ರಾಯಕ್ಕೂ 'ಕಾಣಿಸದಿರುವುದೇ' ಕಾರಣವಾಗಿದೆ. ಮುಂದಿರುವುದು ಕಾಣುವುದಿಲ್ಲ, ಮುಂದಿರುವುದಕ್ಕೆ ಆತನಿಗೆ ಸಲ್ಯೂಷನ್ ಸಿಗುವುದಿಲ್ಲ. ಆದ್ದರಿಂದ ಭಿನ್ನಾಭಿಪ್ರಾಯ ಉಂಟಾಗುತ್ತದೆ. ಈ ಕೋಪ–ಅಹಂಕಾರ–ಮಾಯೆ–ಲೋಭ ಮುಂತಾದ ನಡವಳಿಕೆಗಳಿಗೂ ಕಾರಣ, 'ಕಾಣಿಸದಿರುವುದೇ' ಆಗಿದೆ! ಹಾಗಿದ್ದ ಮೇಲೆ ಅಂತಹ ವಿಷಯವನ್ನು ಅರ್ಥ ಮಾಡಿಕೊಳ್ಳಬೇಕಲ್ಲವೇ? ಯಾರಿಗೇ ಪೆಟ್ಟಾಯಿತೋ ದೋಷವೂ ಅವರದ್ದೇ ಅಲ್ಲವೇ! ಇದರಲ್ಲಿ ಗೋಡೆಯ ತಪ್ಪೇನಾದರೂ ಇದೆಯೇ? ಇದರಂತೇ ಈ ಸಂಸಾರದಲ್ಲೂ ಎಲ್ಲರೂ ಗೋಡೆಗಳೇ. ಗೋಡೆ ಗುದ್ದಿದಾಗ ನೀವು ಅದರೊಂದಿಗೆ ಸರಿ–ತಪ್ಪುಗಳ ವಾದ ಮಾಡುವುದಿಲ್ಲ ಅಲ್ಲವೇ? 'ನಾನು ಮಾಡಿದ್ದು ಸರಿ' ಎಂಬ ವಾದವಿವಾದಗಳ ಜಗಳದಲ್ಲಿ ಬೀಳುವುದಿಲ್ಲ ಅಲ್ಲವೇ? ಅದರಂತೆಯೇ ಎಲ್ಲರೂ ಗೋಡೆಗಳ ಸ್ಥಿತಿಯಲ್ಲೇ ಇದ್ದಾರೆ. ಯಾರೊಂದಿಗೂ ನಿಜವೇನೆಂದು ವಾದ ಮಾಡುವ ಅಗತ್ಯವಿಲ್ಲ.

## ಜಗಳ ಮಾಡುವುದು, ಇದು ನಮ್ಮದೇ ಅಜ್ಞಾನವಾಗಿದೆ

ಜಗಳ ಮಾಡಲು ಕಾರಣವೇನು? ಅಜ್ಞಾನ. ಬೇರೆಯವರೊಂದಿಗೆ ಭಿನ್ನಾಭಿಪ್ರಾಯ ಇರುವವರೆಗೂ, ಅದು ನಿಮ್ಮಲ್ಲಿರುವ ದೌರ್ಬಲ್ಯವನ್ನು ಸೂಚಿಸುತ್ತಿರುತ್ತದೆ. ತಪ್ಪು ಜನರದ್ದಲ್ಲ, ಭಿನ್ನಾಭಿಪ್ರಾಯ ಹೊಂದಿರುವುದು ನಿಮ್ಮದೇ ತಪ್ಪು. ಜನರ ತಪ್ಪೇನೂ ಇರುವುದೇ ಇಲ್ಲ. ಆತ ತಿಳಿದೂ ತಿಳಿದೂ ಜಗಳ ಮಾಡುತ್ತಿದ್ದರೂ, ನಾವು ಅಲ್ಲಿ 'ಇದು ನನಗೆ ಅರ್ಥವಾಗದು' ಎಂದು ಹೇಳುತ್ತಾ ಕ್ಷಮೆ ಕೇಳಬೇಕು. ಅವರು ಜಗಳವಾಡಿದ್ದೇ ಆದರೆ, ಅದು ನಮ್ಮದೇ ತಪ್ಪಾಗಿರುತ್ತದೆ.

## ಘರ್ಷಣೆಯಿಂದ ನಾಶವಾಗುತ್ತವೆ ಶಕ್ತಿಗಳು

ಈ ಘರ್ಷಣೆಗಳಿಂದಾಗಿ ಸಂಪೂರ್ಣ ಆತ್ಮಶಕ್ತಿಯು ನಾಶವಾಗಿ ಹೋಗುವುದು. ಸಹಜವಾಗಿಯೇ ಜಗಳವಾಡಿದರೂ ಮುಗಿದಂತೆಯೇ. ಎದುರಿಗಿರುವ ವ್ಯಕ್ತಿ ಜಗಳವಾಡಲು ಬಂದಾಗ ನಾವು ಸಂಯಮದಿಂದ ಎಚ್ಚರ ವಹಿಸಬೇಕು. ಘರ್ಷಣೆಗಳಿಗೆ ಒಳಪಡದ ಮನುಷ್ಯ ಮೋಕ್ಷ ಮಾರ್ಗದಲ್ಲಿ ಮುಂದೆ ಸಾಗಲು ಸಾಧ್ಯವಿದೆ. ಯಾರು 'ನಾನು ಘರ್ಷಣೆಗಳಿಗೆ ಒಳಪಡಬಾರದು' ಎಂಬುದನ್ನು ಕಲಿತರೋ, ಅಂಥವರಿಗೆ ಗುರುವಿನ ಅಥವಾ ಇನ್ಯಾರ ಅವಶ್ಯಕತೆಯೂ ಇರುವುದಿಲ್ಲ. ಒಂದೆರಡು ಜನ್ಮಗಳಲ್ಲೇ ನೇರವಾಗಿ ಮೋಕ್ಷಪ್ರಾಪ್ತಿಯಾಗುತ್ತದೆ. 'ನಾನು ಎಂದೂ ಘರ್ಷಣೆಗಳಿಗೆ ಒಳಪಡಲೇಬಾರದು' ಎಂಬುದು ಯಾರ ಶ್ರದ್ಧೆಯಲ್ಲಿ ಸ್ಥಿರವಾಗಿಬಿಡುತ್ತದೋ, ಅವರು ಸಮಚಿತ್ತರಾದಂತೆ (ಸಮಕಿತ್)!

ಪೂರ್ವದಲ್ಲಿ ಘರ್ಷಣೆಯಿಂದಾಗಿ ನಷ್ಟವಾಗಿ ಹೋಗಿರುವ ಶಕ್ತಿಯು ಮತ್ತೆ ಹಿಂದಿರುಗಿ ಬರುತ್ತದೆ. ಆದರೆ, ಈಗ ಹೊಸ ಘರ್ಷಣೆಗಳನ್ನು ಸೃಷ್ಟಿ ಮಾಡಿದರೆ, ಶಕ್ತಿಗಳೆಲ್ಲಾ ಹೊರಟುಹೋಗುವುದಲ್ಲದೇ ಪಡೆದಂತಹ ಶಕ್ತಿಗಳೂ ಹೊರಟುಹೋಗುತ್ತವೆ. ಹೀಗಾಗಿ ನೀವು ಘರ್ಷಣೆಗಳೇ ಆಗಲು ಬಿಡದಿದ್ದರೆ, ಶಕ್ತಿ ಉತ್ಪನ್ನವಾಗುತ್ತಾ ಹೋಗುತ್ತದೆ!

ಈ ಜಗತ್ತಿನಲ್ಲಿ ಘರ್ಷಣೆಗಳಾಗುವುದು ಹಗೆತನದಿಂದ. ಸಂಸಾರದ ಮೂಲ ಬೀಜವೇ ಹಗೆತನವಾಗಿದೆ. ಯಾರಲ್ಲಿ ಹಗೆತನ ಮತ್ತು ಘರ್ಷಣೆ ಇರುವುದಿಲ್ಲವೋ, ಅವರ ಮೋಕ್ಷವಾದಂತೆಯೇ! ಪ್ರೇಮವು ಬಾಧಕವಲ್ಲ. ವೈರತ್ವವು ಇಲ್ಲವಾದಾಗ ಪ್ರೇಮವು ಉತ್ಪನ್ನವಾಗುವದು.

## ಕಾಮನ್‌ಸೆನ್ಸ್, ಎವ್‌ರಿವ್ಹೇರ್ ಅಪ್ಲಿಕೆಬಲ್

ಯಾರಾದರೂ ನಮ್ಮೊಂದಿಗೆ ಜಗಳವಾಡಿದರೂ, ನಾವು ಅವರೊಂದಿಗೆ ಜಗಳವಾಡದೆ ಇದ್ದರೆ, ಅದರಿಂದ 'ಕಾಮನ್‌ಸೆನ್ಸ್' ಉತ್ಪನ್ನವಾಗುವುದು. ಅಲ್ಲಿ ನಾವೇನಾದರೂ ಜಗಳವಾಡಿದರೆ, ಕಾಮನ್‌ಸೆನ್ಸ್ ಹೊರಟುಹೋಗುತ್ತದೆ! ಘರ್ಷಣೆ ನಮ್ಮ ಕಡೆಯಿಂದ ಇರಬಾರದು. ಎದುರಿನವರ ಘರ್ಷಣೆಯಿಂದಾಗಿ ನಮ್ಮಲ್ಲಿ 'ಕಾಮನ್‌ಸೆನ್ಸ್' ಉತ್ಪನ್ನವಾಗುವುದು. ಈ ಆತ್ಮದ ಶಕ್ತಿ ಹೇಗಿದೆಯೆಂದರೆ, ಘರ್ಷಣೆಯ ಸಮಯದಲ್ಲಿ ಹೇಗೆ ವರ್ತಿಸಬೇಕೆಂಬ ಎಲ್ಲಾ ಉಪಾಯಗಳನ್ನು ಹೇಳಿಕೊಡುತ್ತದೆ. ಒಮ್ಮೆ ಉಪಾಯಗಳು ತಿಳಿದ ಮೇಲೆ ಮತ್ತೆ ಆ ಜ್ಞಾನ ಹೋಗುವುದೇ ಇಲ್ಲ. ಹೀಗೆ ಮಾಡುತ್ತಾ, ಮಾಡುತ್ತಾ 'ಕಾಮನ್‌ಸೆನ್ಸ್' ಹೆಚ್ಚಾಗುತ್ತದೆ.

ಈ ಗೋಡೆಯ ವಿಚಾರವಾಗಿ ನಕಾರಾತ್ಮಕ (ಉಲ್ಟಾ) ವಿಚಾರಗಳು ಬಂದರೂ ಏನೂ ತೊಂದರೆಯಿಲ್ಲ, ಏಕೆಂದರೆ ನಷ್ಟವಾಗುವುದು ಏಕಪಕ್ಷೀಯವಾಗಿದೆ. ಆದರೆ ಯಾವುದೇ ಜೀವಂತ ವ್ಯಕ್ತಿಯ ವಿಷಯದಲ್ಲಿ ಒಂದೇ ಒಂದು ನಕಾರಾತ್ಮಕ (ಉಲ್ಟಾ) ವಿಚಾರ ಬಂದರೆ ಅದು ಅಪಾಯಕಾರಿ. ಎರಡೂ ಪಕ್ಷಗಳಿಗೆ ತೊಂದರೆಯಾಗುತ್ತದೆ. ಆದರೆ ನಾವು ನಂತರ ಪ್ರತಿಕ್ರಮಣ (ಕ್ಷಮಾಯಾಚನೆ) ಮಾಡಿದರೆ ಎಲ್ಲಾ ದೋಷಗಳೂ ಹೊರಟುಹೋಗುತ್ತವೆ. ಆದ್ದರಿಂದ ಎಲ್ಲೆಲ್ಲಿ ಘರ್ಷಣೆಯಾಗುತ್ತದೋ, ಅಲ್ಲಲ್ಲಿ ಪ್ರತಿಕ್ರಮಣ ಮಾಡಿದರೆ, ಆಗ ಘರ್ಷಣೆ ಕೊನೆಗೊಳ್ಳುತ್ತದೆ.

ಯಾರು ಘರ್ಷಣೆಗೆ ಒಳಪಡುವುದಿಲ್ಲವೋ ಅವರು ಮೂರು ಜನ್ಮಗಳೊಳಗೆ ಮೋಕ್ಷವನ್ನು ಪಡೆಯುತ್ತಾರೆ, ಇದಕ್ಕೆ ನಾನು ಗ್ಯಾರಂಟಿ ನೀಡುತ್ತೇನೆ. ಘರ್ಷಣೆಯಾದರೆ ಪ್ರತಿಕ್ರಮಣ ಮಾಡಿಬಿಡಿ. ಘರ್ಷಣೆಗಳು ಆಗಲೇಬೇಕಾಗುತ್ತವೆ. ಎಲ್ಲಿಯವರೆಗೆ ಮನೋವಿಕಾರಗಳು ಇರುತ್ತವೆಯೋ ಅಲ್ಲಿಯವರೆಗೆ ಸಂಬಂಧಗಳು ಇರುತ್ತವೆ ಹಾಗೂ ಅಲ್ಲಿಯವರೆಗೆ ಘರ್ಷಣೆಗಳೂ ಇರುತ್ತವೆ. ಘರ್ಷಣೆಯ ಮೂಲ ವಿಷಯಾಸಕ್ತಿಯೇ ಆಗಿದೆ. ಯಾರು ವಿಷಯಾಸಕ್ತಿಯನ್ನು ಗೆಲ್ಲುತ್ತಾರೋ, ಅವರನ್ನು ಸೋಲಿಸಲು ಯಾರಿಂದಲೂ ಸಾಧ್ಯವಿಲ್ಲ. ಅವರ ಪ್ರಭಾವ ಇತರರ ಮೇಲೂ ಉಂಟಾಗುತ್ತದೆ.

*****

# ಆಗುವುದೆಲ್ಲವೂ ನ್ಯಾಯವೇ

## ಪ್ರಕೃತಿಯು ಎಂದೂ ನ್ಯಾಯಯುತವೇ ಆಗಿರುತ್ತದೆ

ಪ್ರಕೃತಿಯ ನ್ಯಾಯದಲ್ಲಿ ಒಂದು ಕ್ಷಣಕಾಲವೂ ಅನ್ಯಾಯವಾಗಲು ಸಾಧ್ಯವಿಲ್ಲ. ಕೋರ್ಟಿನಲ್ಲಿ ಅನ್ಯಾಯವಾಗಿರಬಹುದು, ಆದರೆ ಪ್ರಕೃತಿಯಲ್ಲಿ ಎಂದೂ ಅನ್ಯಾಯವಾಗಿಲ್ಲ.

ಪ್ರಕೃತಿಯ ನ್ಯಾಯವನ್ನು ಸ್ವೀಕರಿಸಿ, 'ಆಗುವುದೆಲ್ಲವೂ ನ್ಯಾಯವೇ' ಎಂದು ಅರಿತರೆ, ನೀವು ಈ ಜಗತ್ತಿನಿಂದ ಮುಕ್ತರಾಗಬಲ್ಲಿರಿ. ಪ್ರಕೃತಿಯನ್ನು ಸಹಜವಾಗಿಯೇ ಅನ್ಯಾಯಯುತ ಎಂದು ಭಾವಿಸಿದರೆ, ಅದು ನಿಮಗೆ ಜಗತ್ತಿನಲ್ಲಿ ಸಮಸ್ಯೆಗಳಿಗೆ ಕಾರಣವಾಗುತ್ತದೆ. ಪ್ರಕೃತಿಯನ್ನು ನ್ಯಾಯಯುತ ಎಂದು ಭಾವಿಸುವುದನ್ನು ಜ್ಞಾನ ಎಂದು ಕರೆಯಲಾಗುತ್ತದೆ. 'ಯಾವುದು ಹೇಗಿದೆಯೋ ಅದನ್ನು ಹಾಗೆಯೇ ಅರ್ಥ ಮಾಡಿಕೊಳ್ಳುವುದನ್ನು' ಜ್ಞಾನ ಎಂದು ಕರೆಯಲಾಗುತ್ತದೆ ಮತ್ತು 'ಯಾವುದು ಹೇಗಿದೆಯೋ ಅದನ್ನು ಹಾಗೆಯೇ ಅರ್ಥ ಮಾಡಿಕೊಳ್ಳದೇ ಇರುವುದನ್ನು' ಅಜ್ಞಾನ ಎಂದು ಕರೆಯಲಾಗುತ್ತದೆ.

ಜಗತ್ತಿನಲ್ಲಿ ನ್ಯಾಯಕ್ಕಾಗಿ ನಡೆದಿರುವ ಹುಡುಕಾಟದಿಂದಲೇ ಎಲ್ಲಾ ಹೊಡೆದಾಟಗಳೂ ಉಂಟಾಗಿರುವುದು. ಜಗತ್ತಿನ ಸ್ವರೂಪವೇ ನ್ಯಾಯವಾಗಿದೆ. ಹೀಗಾಗಿ ಈ ಜಗತ್ತಿನಲ್ಲಿ ನ್ಯಾಯವನ್ನು ಹುಡುಕಲೇಬೇಡಿ. ಯಾವುದು ಘಟಿಸಿತೋ ಅದು ನ್ಯಾಯವೇ. ಈ ಕೋರ್ಟ್‌ಗಳಲ್ಲಿ ಏನೆಲ್ಲಾ ನಡೆಯುತ್ತದೋ ಅದನ್ನು ನ್ಯಾಯವೆಂದು ಹೇಳಲು ಸಾಧ್ಯವೇ? ಅಯ್ಯಾ ಮೂಢಾ, ನ್ಯಾಯ ಅಲ್ಲಿದೆಯೇ? ಅದಕ್ಕಿಂತ, ಏನು ನಡೆಯುತ್ತಿದೆಯೋ, ಅದೇ ನ್ಯಾಯವಾಗಿದೆ. ನ್ಯಾಯಾನ್ಯಾಯಗಳ ಫಲ ಲೆಕ್ಕಾಚಾರದ ಪ್ರಕಾರ ದೊರೆಯುತ್ತದೆ. ಆದರೆ, ನಾವು ಅದರೊಂದಿಗೆ ನಮ್ಮ ನ್ಯಾಯವನ್ನು ಜೋಡಿಸಲು ಹೋದಾಗ, ಮತ್ತೆ ಕೋರ್ಟ್‌ಗೆ ಹೋಗಬೇಕಾಗುವ ಸಂದರ್ಭ ಬರುತ್ತದೆ.

ಯಾರಿಗಾದರು ನಾವು ಒಂದು ಮಾತು (ಬೈಗುಳ) ಹೇಳಿದರೆ ಅವರಿಂದ ತಿರುಗಿ ನಮಗೆ ಮೂರು ಬೈಗುಳಗಳನ್ನು ಕೇಳಬೇಕಾಗಿ ಬಂದರೆ, ಅದಕ್ಕೆ ಕಾರಣ ಅವನ ಮನಸ್ಸಿನಲ್ಲಿ ನಮ್ಮ ಮೇಲಿರುವ ಕೋಪ. ಆಗ ಜನ ಏನೆನ್ನುತ್ತಾರೆ? 'ನಿನ್ನ ಒಂದು ಮಾತಿಗೆ ಅವನು ಯಾಕೆ ನಿನಗೆ ಮೂರು ಮಾತುಗಳನ್ನಾಡಿದ?' ಎಂದು. ಇಂಥಾ ಸಂದರ್ಭದಲ್ಲಿ ನ್ಯಾಯವೇನು? ಆಗ ತಿಳಿಯಬೇಕು, ಅವನು ನನಗೆ ಮೂರು ಬೈಗುಳಗಳನ್ನು ಹೇಳಬೇಕಿತ್ತು, ಅದು ಹಿಂದಿನ ಲೆಕ್ಕಚಾರ. ಆ ಲೆಕ್ಕ ತೀರಿಸಬೇಕೋ ಬೇಡವೋ? ಪ್ರಕೃತಿಯ ನ್ಯಾಯವೇನು? ಹಿಂದಿನ ಲೆಕ್ಕವನ್ನೆಲ್ಲಾ ಒಟ್ಟು ಸೇರಿಸುವುದೇ ಪ್ರಕೃತಿಯ ನ್ಯಾಯವಾಗಿದೆ. ಯಾವುದೇ ಸ್ತ್ರೀ ತನ್ನ ಪತಿಗೆ ಕಿರಿಕಿರಿ ಮಾಡುತ್ತಿದ್ದಾಳೆ ಎಂದರೆ ಅದು, ಪ್ರಕೃತಿಯ ನ್ಯಾಯವಾಗಿದೆ. ಆಕೆಯ ಪತಿ, ತನ್ನ ಪತ್ನಿ

ಬಹಳ ಕೆಟ್ಟವಳೆಂದು ಭಾವಿಸುತ್ತಾನೆ ಮತ್ತು ಪತ್ನಿ ಭಾವಿಸುವುದು ತನ್ನ ಪತಿ ಕೆಟ್ಟವನೆಂದು. ಆದರೆ ಇದು ಪ್ರಕೃತಿಯ ನ್ಯಾಯವೇ ಆಗಿದೆ.

ಇದಂತೂ ಈ ಜನ್ಮದಲ್ಲಿ ಬೆವರು ಸುರಿಸಿ ಗಳಿಸಿದ ಸಂಪಾದನೆಯಾಗಿದೆ, ಆದರೆ ಮೊದಲಿನ ಲೆಕ್ಕಾಚಾರ ಇದೆಯಲ್ಲವೇ! ಖಾತೆಗಳಲ್ಲಿ ಕೊಡಬೇಕಾದ ಬಾಕಿ ಇದೆ. ಇಲ್ಲವಾದರೆ, ಎಂದೂ ಯಾರೂ ನಮ್ಮಿಂದ ಏನನ್ನೂ ತೆಗೆದುಕೊಳ್ಳಲು ಸಾಧ್ಯವಿಲ್ಲ. ಯಾರಿಗೂ ತೆಗೆದುಕೊಳ್ಳುವಂತಹ ಶಕ್ತಿಯೂ ಇಲ್ಲ. ಹಾಗೇನಾದರೂ ತೆಗೆದುಕೊಂಡರೆ, ಅದು ನಮ್ಮ ಹಿಂದಿನ-ಮುಂದಿನ ಯಾವುದೋ ಲೆಕ್ಕದ್ದಾಗಿರುತ್ತದೆ. ಈ ಜಗತ್ತಿನಲ್ಲಿ, ಯಾರಿಗಾದರೂ ಏನನ್ನಾದರೂ ಮಾಡಲು ಸಾಧ್ಯವಿರುವಂತಹವರು ಯಾರೂ ಹುಟ್ಟಿಯೇ ಇಲ್ಲ. ಅಷ್ಟೊಂದು ನಿಯಮ ಬದ್ಧವಾಗಿದೆ ಈ ಜಗತ್ತು.

## ಕಾರಣದ ಅರಿವು, ಪರಿಣಾಮದ ಮೂಲಕ

ಈ ಎಲ್ಲವೂ ರಿಜಲ್ಟ್ ಆಗಿದೆ, ಹೇಗೆ ಪರೀಕ್ಷೆಯ ಫಲಿತಾಂಶ ಬರುತ್ತದೋ ಹಾಗೆ. ಗಣಿತದಲ್ಲಿ ನೂರಕ್ಕೆ ತೊಂಬತ್ತೈದು ಅಂಕಗಳು ಬಂದಿದೆ, ಇಂಗ್ಲಿಷ್‌ನಲ್ಲಿ ನೂರಕ್ಕೆ ಇಪ್ಪತ್ತೈದು ಅಂಕಗಳು ಬಂದಿದೆ ಎಂದು ಪರೀಕ್ಷೆಯ ರಿಜಲ್ಟ್ ಬಂದಾಗ, ಎಲ್ಲಿ ತಪ್ಪಾಗಿದೆ ಎಂದು ನಮಗೆ ತಿಳಿಯುವುದಿಲ್ಲವೇ? ಯಾವ ಕಾರಣದಿಂದ ತಪ್ಪಾಗಿದೆ ಎಂದು ಈ ಪರಿಣಾಮದಿಂದ ನಾವು ತಿಳಿಯಬಹುದು, ಅಲ್ಲವೇ? ಹಾಗೆಯೇ, ಜೀವನದಲ್ಲಿ ಸಂಯೋಗಗಳು ಸೇರಿದಾಗ, ಇಂತಹ ಎಲ್ಲಾ ಪರಿಣಾಮಗಳು ಕಂಡು ಬರುತ್ತವೆ ಮತ್ತು ಪ್ರತಿಯೊಂದು ಪರಿಣಾಮ ಉಂಟಾಗಬೇಕಾದರೆ ಯಾವ ಕಾರಣ ಇದ್ದಿರಬಹುದು ಎಂಬುದು ಪರಿಣಾಮದ ಮೂಲಕ ನಮಗೆ ಅರಿವಾಗುತ್ತದೆ.

ಜನರು ಓಡಾಡುವಂತಹ ಒಂದು ರಸ್ತೆಯಿದ್ದು, ಅದರ ಮೇಲೆ ಜಾಲಿಮರದ ಮುಳ್ಳು ಬಿದ್ದಿದ್ದರೂ, ಬಹಳಷ್ಟು ಜನ ಹೋಗಿ-ಬಂದು ಮಾಡುತ್ತಿದ್ದರೂ, ಮುಳ್ಳು ಹಾಗೇ ಅಲ್ಲಿಯೇ ಬಿದ್ದಿರುತ್ತದೆ. ಸಾಮಾನ್ಯವಾಗಿ ನೀವು ಬೂಟು-ಚಪ್ಪಲಿಗಳಿಲ್ಲದೆ ಮನೆಯಿಂದ ಹೊರಗೆ ಹೋಗುವುದಿಲ್ಲ. ಆದರೆ ಆ ದಿನ ಯಾರದ್ದೋ ಮನೆಗೆ ಹೋಗಿದ್ದಾಗ, ಕಳ್ಳ ಬಂದಿದ್ದಾನೆಂಬ ಕೂಗಾಟವನ್ನು ಕೇಳಿ ಕೂಡಲೇ ಬರಿಗಾಲಿನಲ್ಲೇ ಓಡತೊಡಗಿದಾಗ, ಆ ಮುಳ್ಳು ನಿಮ್ಮ ಪಾದಕ್ಕೆ ಚುಚ್ಚಿಕೊಂಡರೆ, ಅದು ನಿಮ್ಮ ಲೆಕ್ಕದ್ದು!

ಯಾರಾದರೂ ದುಃಖ ನೀಡಿದರೆ ಜಮಾ ಮಾಡಿಕೊಂಡುಬಿಡಿ. ಯಾವುದನ್ನು ನೀವು ಈ ಹಿಂದೆ ನೀಡಿರಬಹುದೋ, ಅದನ್ನೇ ಪುನಃ ಜಮಾ ಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ

ಕಾರಣವಿಲ್ಲದೇ ಯಾರೂ ಯಾರಿಗಾದರೂ ದುಃಖ ನೀಡುವಂತಹ ಕಾನೂನು ಇಲ್ಲಿ ಇಲ್ಲವೇ ಇಲ್ಲ. ಅದರ ಹಿಂದೆ ಕಾರಣ ಇರಲೇಬೇಕು. ಆದ್ದರಿಂದಲೇ, ಜಮಾ ಮಾಡಿಕೊಂಡುಬಿಡಿ.

## ಭಗವಾನರ ಬಳಿ ಹೇಗೆ ನಡೆಯುತ್ತದೆ?

ಭಗವಾನ್ ನ್ಯಾಯಸ್ವರೂಪರೂ ಅಲ್ಲ, ಅವರು ಅನ್ಯಾಯಸ್ವರೂಪರೂ ಅಲ್ಲ. ಯಾರಿಗೂ ದುಃಖವಾಗಬಾರದೆಂಬುದು ಭಗವಾನರ ಭಾಷೆಯಾಗಿದೆ. ನ್ಯಾಯ–ಅನ್ಯಾಯಗಳು, ಲೋಕದ ಭಾಷೆಗಳಾಗಿವೆ.

ಕಳ್ಳ ಕಳ್ಳತನ ಮಾಡುವುದನ್ನು ತನ್ನ ಧರ್ಮವೆಂದು ತಿಳಿಯುತ್ತಾನೆ, ದಾನಿಯು ದಾನ ಮಾಡುವುದನ್ನು ತನ್ನ ಧರ್ಮವೆಂದು ತಿಳಿಯುತ್ತಾನೆ. ಇದು **ಲೌಕಿಕ ಭಾಷೆಯಾಗಿದೆ**, ಭಗವಾನರ ಭಾಷೆಯಲ್ಲ. ಭಗವಾನರ ಬಳಿ 'ಯಾವ ಜೀವಕ್ಕೂ ದುಃಖವಾಗದಿರಲಿ' ಎಂಬುದೇ ಧ್ಯೇಯವಾಗಿದೆ! ಅದುವೇ ನಮ್ಮ ಆಜ್ಞೆ ಆಗಿದೆ!

## ತನ್ನಲ್ಲಿನ ದೋಷ ಅನ್ಯಾಯವನ್ನು ತೋರಿಸುವುದು

ಕೇವಲ ತನ್ನಲ್ಲಿರುವ ದೋಷದ ಕಾರಣ, ಇಡೀ ಜಗತ್ತು ಕಾನೂನುಬಾಹಿರವೆಂದು ಅನಿಸುತ್ತದೆ. ಆದರೆ ಒಂದೇ ಒಂದು ಕ್ಷಣವೂ ಈ ಜಗತ್ತು ಕಾನೂನುಬಾಹಿರವಾಗಿ ನಡೆಯುವುದಿಲ್ಲ. ಸಂಪೂರ್ಣ ನ್ಯಾಯದಲ್ಲಿಯೇ ಇರುತ್ತದೆ. ಇಲ್ಲಿ ಕೋರ್ಟಿನ ನ್ಯಾಯದಲ್ಲಿ ವ್ಯತ್ಯಾಸವಾಗಬಹುದು, ಅದು ತಪ್ಪಾಗಬಹುದು, ಆದರೆ ಈ ಪ್ರಕೃತಿಯ ನ್ಯಾಯದಲ್ಲಿ ವ್ಯತ್ಯಾಸವಾಗುವುದಿಲ್ಲ.

ಒಂದೇ ಒಂದು ಸೆಕೆಂಡ್‌ನಷ್ಟು ಅವಧಿಗೂ ಸಹ ನ್ಯಾಯದಲ್ಲಿ ವ್ಯತ್ಯಾಸವಾಗುವುದಿಲ್ಲ. ಇದರಲ್ಲಿ ಅನ್ಯಾಯವಿದಿದ್ದರೆ, ಆಗ ಯಾರೂ ಮೋಕ್ಷಕ್ಕೆ ಹೋಗುತ್ತಿರಲಿಲ್ಲ. ಒಳ್ಳೆಯವರಿಗೇ ಅಡಚಣೆಗಳು ಏಕೆ ಬರುತ್ತವೆ ಎಂದು ಎಲ್ಲರೂ ಕೇಳುತ್ತಾರೆ. ಆದರೆ ಅಂತಹ ಅಡಚಣೆಗಳನ್ನು ಜನರಿಂದ ಸೃಷ್ಟಿ ಮಾಡಲು ಸಾಧ್ಯವಿಲ್ಲ. ಏಕೆಂದರೆ ನೀವೇ ಖುದ್ದಾಗಿ ಯಾವುದೇ ವಿಷಯದಲ್ಲಿ ಹಸ್ತಕ್ಷೇಪ ಮಾಡದ ಹೊರತು, ನಿಮ್ಮ ಹೆಸರನ್ನು ಹೇಳಬಲ್ಲ ಯಾವ ಶಕ್ತಿಯೂ ಇಲ್ಲ. ನೀವಾಗಿ ನೀವೇ ಹಸ್ತಕ್ಷೇಪ ಮಾಡಿದ್ದೀರಿ ಆದ್ದರಿಂದಲೇ ಇವೆಲ್ಲವೂ ಎದ್ದುನಿಂತಿರುವುದು.

# ಜಗತ್ತು ನ್ಯಾಯ ಸ್ವರೂಪ

ಈ ಜಗತ್ತು ಕೇವಲ ಒಂದು ಹರಟೆಯ ಗಾಳಿಮಾತಿನಂತಲ್ಲ. ಜಗತ್ತಿನ ಸ್ವರೂಪ ನ್ಯಾಯವೇ ಆಗಿದೆ. ಪ್ರಕೃತಿಯು ಎಂದೂ ಸ್ವಲ್ಪವೂ ಅನ್ಯಾಯವನ್ನು ಮಾಡಿಲ್ಲ. ಕೆಲವೊಂದೆಡೆ ಮನುಷ್ಯನು ಬಾರಿ ಹೊಡೆತ್ತಕ್ಕೆ ಬಲಿಯಾಗುತ್ತಾನೆ ಅಥವಾ ಅಪಘಾತ ಸಂಭವಿಸುತ್ತದೆ ಅವೆಲ್ಲವೂ ನ್ಯಾಯಯುತವೇ ಆಗಿರುತ್ತದೆ. ಪ್ರಕೃತಿಯು ನ್ಯಾಯದಿಂದ ಹೊರಹೋಗಿಲ್ಲ. ಏನನ್ನೂ ಅರಿಯದೆ ವ್ಯರ್ಥವಾಗಿ ಜನ ಏನು ಬೇಕಾದರೂ ಮಾತನಾಡುತ್ತಾರೆ ಮತ್ತು ಜೀವನ ಮಾಡುವ ಕಲೆಯನ್ನೂ ಕಲಿತಿಲ್ಲ. ಚಿಂತೆಯ ಮೇಲೆ ಚಿಂತೆ ಮಾಡುತ್ತಲೇ ಇರುತ್ತಾರೆ. ಏನು ನಡೆಯುತ್ತದೋ ಅದನ್ನು ನ್ಯಾಯವೆಂದು ತಿಳಿಯಿರಿ.

'ಏನು ನಡೆಯಿತೋ ಅದು ನ್ಯಾಯ' ಎಂಬುದನ್ನು ಅರಿತರೆ ಸಂಸಾರದಿಂದ ಪಾರಾದಂತೆ. ಈ ಜಗತ್ತಿನಲ್ಲಿ ಒಂದು ಕ್ಷಣ ಕಾಲವೂ ಅನ್ಯಾಯ ನಡೆಯುವುದಿಲ್ಲ. ನ್ಯಾಯವೇ ನಡೆಯುತ್ತಿರುವುದು. ಆದರೆ ಬುದ್ಧಿ ನಮ್ಮನ್ನು ಸಿಕ್ಕಿಹಾಕಿಸುತ್ತದೆ ಮತ್ತು ಪ್ರಕೃತಿಯ ನ್ಯಾಯವನ್ನು ಪ್ರಶ್ನಿಸುವಂತೆ ಮಾಡುತ್ತದೆ. ಆದ್ದರಿಂದಲೇ ನಾವು ಒಂದು ಮೂಲಭೂತ ವಿಷಯವನ್ನು ಹೇಳಲು ಇಚ್ಛಿಸುತ್ತೇವೆ, ಅದೇನೆಂದರೆ: ನೀವು ಬುದ್ಧಿಯಿಂದ ಪ್ರತ್ಯೇಕಗೊಳ್ಳಿ. ನಿಮ್ಮನ್ನು ಸಿಲುಕಿಸುವುದು ಬುದ್ಧಿಯೇ. ಒಮ್ಮೆ ಇದನ್ನು ಅರಿತ ನಂತರ ಬುದ್ಧಿಯ ಅಭಿಪ್ರಾಯವನ್ನು ಒಪ್ಪಿಕೊಳ್ಳಬೇಡಿ. ಏನು ಘಟಿಸಿತೋ ಅದು ನ್ಯಾಯವೇ. ಕೋರ್ಟಿನ ನ್ಯಾಯದಲ್ಲಿ ತಪ್ಪುನೆಪ್ಪುಗಳಾಗಬಹುದು, ಉಲ್ಟಾ–ಸೀದಾ ಆಗಬಹುದು, ಆದರೆ ಪ್ರಕೃತಿಯ ನ್ಯಾಯದಲ್ಲಿ ಯಾವುದೇ ವ್ಯತ್ಯಾಸವಿರದು.

ನ್ಯಾಯವನ್ನು ಹುಡುಕುತ್ತಾ, ಹುಡುಕುತ್ತಾ ಸುಸ್ತಾಗಿಬಿಟ್ಟಿದೆ. ಮನುಷ್ಯರ ಮನದಲ್ಲಿ, 'ತನ್ನ ಯಾವ ತಪ್ಪಿಗಾಗಿ ತನಗೆ ಇಷ್ಟೊಂದು ಹಾನಿಯುಂಟಾಗುತ್ತಿದೆ' ಎಂಬ ಆಲೋಚನೆ ಬರುತ್ತದೆ. ನ್ಯಾಯವನ್ನು ಹುಡುಕಲು ಹೋಗಿ ಎಲ್ಲರಿಗೂ ಪೆಟ್ಟು ಬಿದ್ದಿದೆ, ಹೀಗಾಗಿ ನ್ಯಾಯವನ್ನು ಹುಡುಕಬೇಡಿ. ನ್ಯಾಯವನ್ನು ಹುಡುಕಲು ಹೋಗಿ, ಇವರೆಲ್ಲರೂ ಪೆಟ್ಟು ತಿಂದ ಗುರುತುಗಳು ಮಾತ್ರ ಉಳಿದಿವೆ, ಕೊನೆಯಲ್ಲಿ ಏನಾಗಬೇಕೋ ಅದೇ ಆಗುತ್ತದೆ. ಹಾಗಿದ್ದ ಮೇಲೆ ಮೊದಲೇ ಏಕೆ ಅರ್ಥ ಮಾಡಿಕೊಳ್ಳಬಾರದು? ಇದು ಕೇವಲ ಅಹಂಕಾರದ ಹಸ್ತಕ್ಷೇಪವಷ್ಟೇ!

## ವಿಕಲ್ಪಗಳ ಅಂತ್ಯ, ಅದುವೇ ಮೋಕ್ಷಮಾರ್ಗ

ಬುದ್ಧಿ ವಿಕಲ್ಪಗಳನ್ನು ತೋರಿಸಿದಾಗ ತಿಳಿಯಿರಿ. ಏನು ಘಟಿಸುತ್ತಿದೆಯೋ ಅದುವೇ ನ್ಯಾಯ. ಬುದ್ಧಿ ಎಲ್ಲದರಲ್ಲಿ ನ್ಯಾಯವನ್ನು ಹುಡುಕುತ್ತದೆ, 'ಇವನು ನನಗಿಂತ ಚಿಕ್ಕವನು ಆದರೂ ನನಗೆ ಮರ್ಯಾದೆ ತೋರುವುದಿಲ್ಲ' ಎಂದು ಹೇಳುತ್ತದೆ. ಆತ ಮರ್ಯಾದೆ ಕೊಟ್ಟರೂ ನ್ಯಾಯ, ಕೊಡದಿದ್ದರೂ ನ್ಯಾಯ. ಹೀಗೆ ನಿರ್ವಿವಾದಾತ್ಮಕವಾದರೆ, ನಿರ್ವಿಕಲ್ಪವಾಗಲು ಸಾಧ್ಯ!

ನ್ಯಾಯವನ್ನು ಹುಡುಕಲು ಹೋದರೆ ವಿಕಲ್ಪಗಳು ಹೆಚ್ಚುತ್ತಾ ಹೋಗುತ್ತವೆ ಮತ್ತು ಪ್ರಾಕೃತಿಕ ನ್ಯಾಯವು ವಿಕಲ್ಪಗಳನ್ನು ನಿರ್ವಿಕಲ್ಪಗಳನ್ನಾಗಿ ಮಾಡುತ್ತಾ ಹೋಗುತ್ತದೆ. ಯಾವುದು ಘಟಿಸುತ್ತದೆಯೋ, ಅದೇ ನ್ಯಾಯ. ಒಂದು ವೇಳೆ, ಪಂಚಾಯತಿಯ ಪಂಚರು ಅಥವಾ ನ್ಯಾಯಾಧೀಶರು ನೀಡಿದ ತೀರ್ಮಾನವನ್ನು ಒಬ್ಬ ವ್ಯಕ್ತಿ ನ್ಯಾಯವೆಂದು ಒಪ್ಪದೆ, ಯಾರ ಮಾತನ್ನೂ ಕೇಳದೇ, ಅದಕ್ಕೆ ವಿರುದ್ಧವಾಗಿ ಮುನ್ನಡೆದರೆ, ಆಗ ಆತನ ವಿಕಲ್ಪಗಳು ಹೆಚ್ಚುತ್ತಲೇ ಹೋಗುತ್ತವೆ. ಆತನೇ ಹೆಣೆದ ಜಾಲದಲ್ಲಿ ಆತ ಸಿಲುಕುತ್ತಾ ಹೋಗುತ್ತಾನೆ ಹಾಗು ಏನನ್ನೂ ಪ್ರಾಪ್ತಿ ಮಾಡಿಕೊಳ್ಳಲಾರ ಮತ್ತು ಬಹಳ ದುಃಖಕ್ಕೆ ಒಳಗಾಗುತ್ತಾನೆ! ಇದರ ಬದಲು ಮೊದಲಿನಿಂದಲೇ, ಯಾವುದು ಘಟಿಸಿತೋ ಅದುವೇ ನ್ಯಾಯ ಎಂಬ ಶ್ರದ್ಧೆಯನ್ನು ಇರಿಸಿಕೊಳ್ಳುವುದು ಒಳಿತು.

ಪ್ರಕೃತಿಯು ಎಂದಿಗೂ ನ್ಯಾಯವನ್ನೇ ಮಾಡುತ್ತದೆ, ನಿರಂತರ ನ್ಯಾಯವನ್ನೇ ಮಾಡುತ್ತಿದೆ, ಆದರೆ ಅದಕ್ಕೆ ರುಜುವಾತನ್ನು ನೀಡಲು ಸಾಧ್ಯವಾಗುವುದಿಲ್ಲ. ಇದು ಹೇಗೆ ನ್ಯಾಯ? ಎಂಬ ರುಜುವಾತನ್ನು 'ಜ್ಞಾನಿ'ಗಳು ನೀಡುತ್ತಾರೆ. ಇದು ಹೇಗೆ ಘಟಿಸಿತು? ಎಂಬುದನ್ನು 'ಜ್ಞಾನಿ'ಗಳು ಹೇಳುತ್ತಾರೆ. ಅವರನ್ನು ಸಂತುಷ್ಟರನ್ನಾಗಿ ಮಾಡಿದರೆ ಬಿಡುಗಡೆ ದೊರೆಯುತ್ತದೆ. ನಿರ್ವಿಕಲ್ಪನಾದರೆ, ಆಗ ಬಿಡುಗಡೆಯನ್ನು ಪಡೆಯಬಹುದು.

*****

## ಅನುಭವಿಸುವವರದ್ದೇ ತಪ್ಪು

### ಪ್ರಕೃತಿಯ ನ್ಯಾಯಾಲಯದಲ್ಲಿ . . .

ಈ ಜಗತ್ತಿನಲ್ಲಿ ನ್ಯಾಯಾಧೀಶರು ಬಹಳ ಮಂದಿ ಅಲ್ಲಲ್ಲಿ ಇದ್ದಾರೆ ಆದರೆ ಕರ್ಮದ – ಜಗತ್ತಿನಲ್ಲಿ ಪ್ರಾಕೃತಿಕ ನ್ಯಾಯಾಧೀಶರು ಒಬ್ಬರೇ, ಅದು 'ಯಾರು ಕಷ್ಟ ಅನುಭವಿಸುತ್ತಿದ್ದಾರೋ, ತಪ್ಪು ಅವರದ್ದೇ' ಎಂಬ ಒಂದೇ ಒಂದು ನ್ಯಾಯ ಮಾತ್ರದಿಂದಲೇ ಇಡೀ ಜಗತ್ತು ಕೆಲಸ ಮಾಡುತ್ತಿರುವುದು ಮತ್ತೆ ಇನ್ನುಳಿದದ್ದು ಈ ಭ್ರಾಂತಿಯ ನ್ಯಾಯದಿಂದಲೇ ಇಡೀ ಸಂಸಾರ ನಿಂತಿರುವುದು.

ಒಂದು ಕ್ಷಣ ಕಾಲವೂ ಜಗತ್ತು ನ್ಯಾಯದಿಂದ ಹೊರಗುಳಿಯುವುದಿಲ್ಲ. ಯಾರಿಗೆ ಬಹುಮಾನ ಕೊಡಬೇಕೋ ಅವರಿಗೆ ಬಹುಮಾನ ನೀಡುತ್ತದೆ. ಯಾರಿಗೆ ಶಿಕ್ಷೆ ನೀಡಬೇಕೋ, ಅವರಿಗೆ ಶಿಕ್ಷೆಯನ್ನು ನೀಡುತ್ತದೆ. ಜಗತ್ತು ನ್ಯಾಯದಿಂದ ಹೊರಗುಳಿದಿಲ್ಲ, ನ್ಯಾಯದಲ್ಲೇ ಇದೆ. ಎಲ್ಲವೂ ನ್ಯಾಯಪೂರ್ವಕವೇ ಆಗಿದೆ. ಆದರೆ ಸಾಮಾನ್ಯರ ದೃಷ್ಟಿಗೆ ಇದು ಕಾಣದ ಕಾರಣ ತಿಳಿಯಲಾಗುತ್ತಿಲ್ಲ. ದೃಷ್ಟಿ ನಿರ್ಮಲವಾದಾಗ, ನ್ಯಾಯ ಕಂಡುಬರುತ್ತದೆ. ಎಲ್ಲಿಯವರೆಗೆ ಸ್ವಾರ್ಥಪೂರ್ಣ ದೃಷ್ಟಿ ಇರುತ್ತದೋ, ಅಲ್ಲಿಯವರೆಗೆ ನ್ಯಾಯ ಕಾಣುವುದಾದರೂ ಹೇಗೆ?

### ನಾವೇ ಏಕೆ ಅನುಭವಿಸಬೇಕು?

ನಮಗೆ ಯಾಕೆ ದುಃಖ ಅನುಭವಿಸಬೇಕಾಗಿ ಬಂದಿದೆ, ಎಂಬುದನ್ನು ಪತ್ತೆಮಾಡಬಾರದೇಕೆ? ನಾವು ನಮ್ಮದೇ ತಪ್ಪುಗಳಿಂದ ಬಂಧಿತರಾಗಿದ್ದೇವೆ. ಜನರು ಬಂದು ನಮ್ಮನ್ನು ಕಟ್ಟಿಹಾಕಿಲ್ಲ. ತಪ್ಪುಗಳು ಇಲ್ಲವಾದರೆ, ನಾವು ಮುಕ್ತರು. ವಾಸ್ತವದಲ್ಲಿ ನಾವು ನಿಜಕ್ಕೂ ಮುಕ್ತರೇ ಆಗಿದ್ದೇವೆ ಆದರೆ ತಪ್ಪುಗಳ ಕಾರಣದಿಂದ ಬಂಧನವನ್ನು ಅನುಭವಿಸಬೇಕಾಗುತ್ತದೆ.

ಜಗತ್ತಿನ ವಾಸ್ತವತೆಯ ರಹಸ್ಯಜ್ಞಾನವು ಜನರ ಅರಿವಿನಲ್ಲಿ ಇಲ್ಲವೇ ಇಲ್ಲ ಆದ್ದರಿಂದ ಅಲೆದಾಡಬೇಕಾಗುತ್ತದೆ. ಈ ಅಜ್ಞಾನ–ಜ್ಞಾನಗಳ ವಿಷಯದಲ್ಲಿ ಎಲ್ಲರಿಗೂ ತಿಳಿದಿರುತ್ತದೆ. ಜೇಬುಗಳ್ಳತನವಾದರೆ, ಅದರಲ್ಲಿ ತಪ್ಪು ಯಾರದ್ದು? ಅಲ್ಲಿ ಬೇರೊಬ್ಬನಿಗೆ ಜೇಬುಗಳ್ಳತನವಾಗಲಿಲ್ಲ, ನಿಮ್ಮದೇ ಏಕೆ ಆಯಿತು? ಇಬ್ಬರ ಪೈಕಿ ಈಗ ಅನುಭವಿಸುವವರು ಯಾರು? 'ಯಾರು ಅನುಭವಿಸುತ್ತಿದ್ದಾರೋ, ತಪ್ಪು ಅವರದ್ದೇ!'

## ಕಷ್ಟ ಅನುಭವಿಸುವುದು ತನ್ನದೇ ತಪ್ಪಿನ ಕಾರಣದಿಂದ

ಯಾರು ದುಃಖವನ್ನು ಅನುಭವಿಸುತ್ತಿದ್ದಾರೋ, ತಪ್ಪು ಅವರದ್ದೇ ಹಾಗು ಯಾರು ಸುಖವನ್ನು ಅನುಭವಿಸುತ್ತಿದ್ದಾರೋ, ಅದು ಅವರ ಬಹುಮಾನ. ಆದರೆ, ಭ್ರಾಂತಿಯ ಕಾನೂನು ಒಂದು ನೆಪವನ್ನು (ನಿಮಿತ್ತವನ್ನು) ತಪ್ಪಿತಸ್ಥನೆಂದು ಹಿಡಿಯುವುದು. ಆದರೆ ಭಗವಂತನ ಕಾನೂನು, ಯಾರದ್ದು ತಪ್ಪಿರುತ್ತದೋ ಅವರನ್ನೇ ಹಿಡಿಯುತ್ತದೆ. ಈ ಕಾನೂನು ಕರಾರುವಾಕ್ಕಾಗಿರುತ್ತದೆ ಮತ್ತು ಅದನ್ನು ಬದಲಾವಣೆ ಮಾಡಲು ಸಾಧ್ಯವೇ ಇಲ್ಲ. ಈ ಸಂಸಾರದಲ್ಲಿನ ಕಷ್ಟಗಳನ್ನು ಸಂಪೂರ್ಣ ನಿರ್ಮೂಲನ ಮಾಡಬಲ್ಲಂತಹ ಯಾವುದೇ ಕಾನೂನು ಇಲ್ಲ!

ನಮ್ಮದೇ ಏನೋ ತಪ್ಪಿದ್ದರೆ ತಾನೇ ಎದುರಿಗಿರುವವರು ಮಾತನಾಡುವುದು? ಆದ್ದರಿಂದ ನಮ್ಮ ತಪ್ಪುಗಳನ್ನು ಅಂತ್ಯಗೊಳಿಸುವುದು ಒಳಿತಲ್ಲವೇ! ಈ ಜಗತ್ತಿನಲ್ಲಿ ಯಾವುದೇ ಜೀವವು ಮತ್ತೊಂದು ಜೀವಕ್ಕೆ ತೊಂದರೆ ಕೊಡಲು ಸಾಧ್ಯವಿಲ್ಲ, ಹೀಗಾಗಿ ತೊಂದರೆ ಕೊಡುತ್ತಿರುವುದಾಗಿ ಕಂಡುಬರುವಂತಹ ಎಲ್ಲವೂ ಈ ಮೊದಲು ನಾವು ಮಾಡಿದ ಹಸ್ತಕ್ಷೇಪದ ಪರಿಣಾಮಗಳಾಗಿರುತ್ತವೆ. ಹೀಗಾಗಿ ನಾವು ತಪ್ಪು ಮಾಡುವುದನ್ನು ಕೊನೆಗೊಳಿಸಿದರೆ, ಲೆಕ್ಕ ಉಳಿಯುವುದೇ ಇಲ್ಲ.

ಜಗತ್ತಿರುವುದು ದುಃಖವನ್ನು ಅನುಭವಿಸಲು ಅಲ್ಲ, ಸುಖವನ್ನು ಅನುಭವಿಸಲು. ಪ್ರತಿಯೊಬ್ಬರ ಲೆಕ್ಕಾಚಾರ ಹೇಗಿರುತ್ತದೋ ಆ ಪ್ರಕಾರವಾಗಿ ಘಟನೆಗಳು ಘಟಿಸುತ್ತವೆ. ಕೆಲವರು ಕೇವಲ ಸುಖವನ್ನೇ ಅನುಭವಿಸುತ್ತಾರೆ, ಅದು ಹೇಗೆ ಸಾಧ್ಯ? ಕೆಲವರು ಕೇವಲ ದುಃಖವನ್ನೇ ಅನುಭವಿಸುತ್ತಾರೆ, ಅದು ಹೇಗೆ ಸಾಧ್ಯ? ಹೇಗೆಂದರೆ, ಅವರು ಅಂತಹ ಲೆಕ್ಕಾಚಾರವನ್ನು ತಮ್ಮೊಂದಿಗೆ ತಂದಿದ್ದಾರೆ, ಹೀಗಾಗಿ. ನಾವು ಅನುಭವಿಸಬೇಕಾದ ದುಃಖಗಳು, ನಮ್ಮ ದೋಷಗಳ ಪರಿಣಾಮಗಳಾಗಿರುತ್ತವೆ, ಬೇರೆಯವರ ದೋಷವಲ್ಲ. ಯಾರಾದರೂ ದುಃಖವನ್ನು ನೀಡಿದರೆ, ಅದರಲ್ಲಿ ಅವರದ್ದೇನೂ ತಪ್ಪಿಲ್ಲ. ಸಂಸಾರದ ನಿಯಮದ ಪ್ರಕಾರ ದುಃಖ ನೀಡುವವರು ತಪ್ಪು ಮಾಡಿದ್ದಾರೆ ಎಂದಾದರೆ, ಭಗವಂತನ ನಿಯಮದ ಪ್ರಕಾರ ಅನುಭವಿಸುವವನೇ ತಪ್ಪು ಮಾಡಿದ್ದಾನೆ ಎಂದಾಗುತ್ತದೆ.

## ಪರಿಣಾಮ, ನಮ್ಮದೇ ತಪ್ಪಿನಿಂದ

ನಾವು ಏನಾದರೂ ಕಷ್ಟವನ್ನು ಅನುಭವಿಸಬೇಕಾಗಿ ಬಂದರೆ, ಅದು ನಮ್ಮದೇ ತಪ್ಪಿನ ಪರಿಣಾಮವಾಗಿರುತ್ತದೆ. ನಮ್ಮ ತಪ್ಪಿಲ್ಲದಿದ್ದರೆ ನಾವು ಕಷ್ಟ ಅನುಭವಿಸಬೇಕಾಗುವುದಿಲ್ಲ. ನಮಗೆ

ಕಿಂಚಿತ್ತಾದರೂ ದುಃಖ ನೀಡಬಲ್ಲಂಥವರು ಯಾರೂ ಇಲ್ಲವೇ ಇಲ್ಲ ಹಾಗೂ ಯಾರಾದರೂ ದುಃಖ ನೀಡುತ್ತಿರುವಂತೆ ಕಂಡುಬಂದರೆ, ಅದು ನಮ್ಮ ತಪ್ಪಿನ ಪರಿಣಾಮವಾಗಿರುತ್ತದೆ. ಎದುರಿಗಿರುವವರ ದೋಷ ಇರುವುದಿಲ್ಲ, ಆ ವ್ಯಕ್ತಿ ಕೇವಲ ಒಂದು ನಿಮಿತ್ತ ಮಾತ್ರ. ಆದ್ದರಿಂದ ಯಾರು ಕಷ್ಟ ಅನುಭವಿಸುತ್ತಾರೋ, ತಪ್ಪೂ ಅವರದ್ದೇ ಆಗಿರುತ್ತದೆ.

ತಮ್ಮ ತಮ್ಮೊಳಗೆ ಬಹಳ ಜಗಳವಾಡಿದ ಪತಿ–ಪತ್ನಿ, ನಿದ್ರಿಸಿದ ನಂತರ ನೋಡಿದಾಗ, ಪತ್ನಿ ಆಳವಾದ ನಿದ್ರೆಗೆ ಜಾರಿರುತ್ತಾಳೆ ಆದರೆ ಪತಿ ಮಗ್ಗಲು ಬದಲಿಸುತ್ತಾ ಇರುತ್ತಾನೆ, ಇದರಿಂದಲೇ ನೀವು ಅರ್ಥ ಮಾಡಿಕೊಳ್ಳಬಹುದು ತಪ್ಪೆಲ್ಲಾ ಪತಿಯದೇ ಎಂದು, ಏಕೆಂದರೆ ಕಷ್ಟ ಅನುಭವಿಸುತ್ತಿರುವುದು ಆತನೇ. ಯಾರು ತಪ್ಪು ಮಾಡಿದ್ದಾರೋ, ಕಷ್ಟಪಡುವುದೂ ಅವರೇ, ಒಂದು ಪಕ್ಷ ಪತಿ ನಿದ್ರಿಸುತ್ತಿದ್ದು ಪತ್ನಿ ನಿದ್ದೆಯಿಲ್ಲದೆ ಎಚ್ಚರವಾಗಿದ್ದರೆ ತಪ್ಪು ಪತ್ನಿಯದ್ದೇ ಎಂದು ಅರ್ಥ ಮಾಡಿಕೊಳ್ಳಿ. 'ಯಾರು ಕಷ್ಟ ಅನುಭವಿಸುತ್ತಾರೋ, ತಪ್ಪೂ ಅವರದೇ'. ಆದರೆ ಈ ಸಂಸಾರವು ನಿಮಿತ್ತಕ್ಕೆ ಶಿಕ್ಷೆ ಕೊಡಲು ಹೋಗುತ್ತದೆ.

## ಭಗವಂತನ ಕಾನೂನು ಹೇಗಿರುತ್ತದೆ?

ಯಾವುದೇ ಕ್ಷೇತ್ರದಲ್ಲಿ ಯಾವುದೇ ಸಮಯದಲ್ಲಿ ಯಾರು ಕಷ್ಟವನ್ನು ಅನುಭವಿಸುತ್ತಾರೋ ಆತನೇ ತಪ್ಪಿತಸ್ಥ ಎಂಬುದು ಭಗವಂತನ ಕಾನೂನು. ಯಾರದ್ದಾದರೂ ಜೇಬುಗಳ್ಳತನವಾದರೆ ಜೇಬುಗಳ್ಳನಿಗಂತೂ ಅದು ಆನಂದದ ವಿಷಯವಾಗಿರುತ್ತದೆ, ಆತ ಜಿಲೇಬಿಗಳನ್ನು ತಿನ್ನುತ್ತಾ, ಹೋಟೆಲ್‌ನಲ್ಲಿ ತಿಂಡಿ–ಕಾಫಿ ಸೇವಿಸುತ್ತಾ ಇರುತ್ತಾನೆ. ಆದರೆ ಅದೇ ಸಮಯದಲ್ಲಿ ಯಾರ ಜೇಬುಗಳ್ಳತನವಾಗಿದೆಯೋ ಆತ ಕಷ್ಟಪಡುತ್ತಾ ಇರುತ್ತಾನೆ. ಆದ್ದರಿಂದಲೇ ಕಷ್ಟ ಅನುಭವಿಸುವವನದೇ ತಪ್ಪು. ಈತನೂ ಎಂದೋ (ಹಿಂದಿನ ಜನ್ಮದಲ್ಲಿ) ಕಳ್ಳತನ ಮಾಡಿದ್ದಿರಬಹುದು, ಆದ್ದರಿಂದ ಪ್ರಕೃತಿಯ ಕಾನೂನಿನ ಪ್ರಕಾರ ಇಂದು ಸಿಕ್ಕಿಬಿದ್ದಿದ್ದಾನೆ. ಆದರೆ, ಈಗ ಕಳ್ಳತನ ಮಾಡಿದವ ಸಮಯ ಬಂದಾಗ ಸಿಕ್ಕಿಬೀಳುತ್ತಾನೆ.

ಪ್ರಪಂಚದ ಜನ ಎದುರಿಗಿರುವ ವ್ಯಕ್ತಿಯ ತಪ್ಪನ್ನು ನೋಡುತ್ತಾರೆ. ಪ್ರತಿಯೊಬ್ಬ ಮನುಷ್ಯ ತಾನು ಕಷ್ಟವನ್ನು ಅನುಭವಿಸುತ್ತಿರುವುದು, ಎದುರಿಗಿರುವವರ ತಪ್ಪಿನಿಂದಾಗಿ ಎಂದು ತಿಳಿಯುತ್ತಾನೆ. ಹೀಗೆ ಮಾಡುವುದರಿಂದ ಅಪರಾಧ ದುಪ್ಪಟ್ಟಾಗುತ್ತಾ ಹೋಗುತ್ತದೆ ಮತ್ತು ವ್ಯವಹಾರದಲ್ಲಿ ಸಮಸ್ಯೆಗಳು ಹೆಚ್ಚಾಗುತ್ತಾ ಹೋಗುತ್ತದೆ. ಈ ವಿಷಯವನ್ನು ಅರ್ಥ ಮಾಡಿಕೊಂಡರೆ ಸಮಸ್ಯೆಗಳು ಕಡಿಮೆಯಾಗುತ್ತವೆ.

ಕಣ್ಣುಗಳಿಗೆ ಕಾಣುವಂಥದ್ದನ್ನು ತಪ್ಪು ಎಂದು ಹೇಳುವುದು ಈ ಸಂಸಾರದ ನಿಯಮ. ಆದರೆ ಯಾರು ಕಷ್ಟ ಅನುಭವಿಸುತ್ತಿದ್ದಾರೋ ಅವರದ್ದೇ ತಪ್ಪು ಎಂಬುದು ಪ್ರಕೃತಿಯ ನಿಯಮ.

ನಾವು ಯಾರಿಗೂ ಕಿಂಚಿತ್ತೂ ದುಃಖ ನೀಡದಿದ್ದರೂ ನಮಗೆ ಯಾರಾದರೂ ದುಃಖ ಉಂಟು ಮಾಡಿದರೆ ಅದನ್ನು ಜಮಾ ಮಾಡಿಕೊಂಡುಬಿಡಬೇಕು, ಆಗ ನಮ್ಮ ಖಾತೆಯ ಬಾಕಿ ಪೂರ್ಣವಾಗಿಬಿಡುತ್ತದೆ. ಯಾರಿಗೂ ದುಃಖ ನೀಡದೆ, ಹೊಸ ವ್ಯಾಪಾರವನ್ನು ಆರಂಭಿಸದೆ, ಹಳೆಯದಕ್ಕೆ ಪರಿಹಾರವನ್ನು ಕಂಡುಕೊಂಡರೆ, ಬಾಕಿಲೆಕ್ಕ ಚುಕ್ತಾ ಆದಂತಾಗುತ್ತದೆ.

## ಉಪಕಾರಿ, ಕರ್ಮದಿಂದ ಮುಕ್ತಮಾಡುವವರು

ಜಗತ್ತಿನಲ್ಲಿ ಯಾರದ್ದೂ ದೋಷವಿಲ್ಲ, ಯಾರು ದೋಷಗಳನ್ನು ನೋಡುವರೋ ಅವರಲ್ಲೇ ದೋಷಗಳಿರುತ್ತವೆ. ಜಗತ್ತಿನಲ್ಲಿ ಯಾರೂ ದೋಷಿಗಳಿಲ್ಲ. ಅವರವರ ಕರ್ಮದ ಉದಯದಿಂದಾಗಿ ಎಲ್ಲವೂ ಘಟಿಸುವುದು. ಈಗ ನಾವು ಏನು ಅನುಭವಿಸುತ್ತಿದ್ದೇವೊ, ಅದು ಇಂದು ಮಾಡಿದ ತಪ್ಪಿಗಲ್ಲ. ಹಿಂದಿನ ಜನ್ಮದ ಕರ್ಮದ ಫಲಸ್ವರೂಪವಾಗಿ ಎಲ್ಲವೂ ಘಟಿಸುತ್ತಿದೆ. ಇಂದು ಪಶ್ಚಾತ್ತಾಪವಾಗುತ್ತಿರಬಹುದು, ಆದರೆ ಕರಾರು (ಕಾಂಟ್ರಾಕ್ಟ್) ಆಗಿಹೋಗಿರುವಾಗ ಈಗೇನು ಮಾಡುವುದು? ಅದನ್ನು ಪೂರ್ಣಗೊಳಿಸದೇ ಬೇರೆ ದಾರಿಯಿಲ್ಲ.

ಸೊಸೆ, ಅತ್ತೆಗೆ ದುಃಖ ಕೊಡುತ್ತಿದ್ದರೆ ಅಥವಾ ಅತ್ತೆ, ಸೊಸೆಗೆ ದುಃಖ ನೀಡುತ್ತಿದ್ದರೆ, ಅಲ್ಲಿ ಯಾರು ಅನುಭವಿಸುತ್ತಾರೋ, ಅವರದ್ದೇ ತಪ್ಪಾಗಿರುತ್ತದೆ. ಅತ್ತೆಯಿಂದ ಸೊಸೆಗೆ ದುಃಖವಾದಾಗ ಸೊಸೆ, ಇದು ನನ್ನದೇ ತಪ್ಪು ಎಂದು ತಿಳಿಯಬೇಕು. ಹಾಗೆ, ಸೊಸೆ ಅತ್ತೆಗೆ ದುಃಖ ಕೊಟ್ಟಾಗ ಅತ್ತೆ, ಇದು ಅವರದ್ದೇ ತಪ್ಪೆಂದು ಅರಿತುಕೊಳ್ಳಬೇಕು. ಇಬ್ಬರೂ ಪರಸ್ಪರ ದೋಷಗಳನ್ನು ನೋಡುವುದರಿಂದ ಇನ್ನೂ ಹೆಚ್ಚಿನ ಸಮಸ್ಯೆಗಳು ಉತ್ಪನ್ನವಾಗುತ್ತವೆ, ಕಾಂಪ್ಲೆಕ್ಸ್ ಆಗುತ್ತಾ ಹೋಗುತ್ತವೆ. ಅದರ ಬದಲು, ದಾದಾರವರ ಜ್ಞಾನದಿಂದ ಅರಿತುಕೊಳ್ಳಿ, 'ಯಾರು ಅನುಭವಿಸುತ್ತಾರೋ ಅವರದ್ದೇ ತಪ್ಪು'!

ಬಿಡುಗಡೆ ಹೊಂದಬೇಕೆಂದಿದ್ದರೆ, ಯಾವುದೇ ಕಹಿ–ಸಿಹಿ ಪ್ರಸಂಗಗಳೇ ಇರಲಿ ಅದನ್ನು ಜಮಾ ಮಾಡಿಕೊಂಡು ಬಿಡಿ. ಲೆಕ್ಕಾಚಾರ ಚುಕ್ತಾ ಮಾಡಿಬಿಡಿ. ಈ ಜಗತ್ತಿನಲ್ಲಿ, ಲೆಕ್ಕಾಚಾರವಿಲ್ಲದೇ ಒಬ್ಬರ ಕಣ್ಣು ಮತ್ತೊಬ್ಬರ ಕಣ್ಣಿನೊಂದಿಗೆ ದೃಷ್ಟಿ ಕೂಡಾ ಬೆರೆಯುವುದಿಲ್ಲ. ಹಾಗಿದ್ದಾಗ ಬೇರೆಲ್ಲಾ ವಿಷಯಗಳಲ್ಲಿ ಲೆಕ್ಕಾಚಾರವಿಲ್ಲದೆ ನಡೆಯಲು ಸಾಧ್ಯವೇ? ನೀವು ಎಷ್ಟೆಷ್ಟು

ಎಲ್ಲೆಲ್ಲಿ ಕೊಟ್ಟಿದ್ದೀರೋ, ಅಷ್ಟಷ್ಟು ನಿಮಗೆ ಮತ್ತೆ ಹಿಂದಿರುಗಿ ಬರುತ್ತದೆ. ಆಗ ನೀವು ಏನೂ ಹೇಳದೆ ಜಮಾ ಮಾಡಿಕೊಳ್ಳಿ, ನಿಮ್ಮ ಹಿಂದಿನ ಲೆಕ್ಕಾಚಾರ ಪೂರ್ಣವಾಗುವುದು.

ನಾವೇ ಮಾಡಿದ ತಪ್ಪುಗಳಿಗಾಗಿ ಈಗ ಪೆಟ್ಟುಗಳು ಬೀಳುತ್ತಿವೆ. ಯಾರು ಕಲ್ಲನ್ನು ಎಸೆದರೋ ತಪ್ಪು ಅವರದಲ್ಲ, ಯಾರಿಗೆ ಕಲ್ಲು ತಗಲಿತೋ, ತಪ್ಪು ಅವರದ್ದು! ನಿಮ್ಮ ಆಸುಪಾಸಿನ ಮಕ್ಕಳು ಎಂತಹ ತಪ್ಪನ್ನೇ ಅಥವಾ ದುಷ್ಕೃತ್ಯವನ್ನೇ ಮಾಡಿದರೂ, ಅದರ ಪರಿಣಾಮ ನಿಮ್ಮ ಮೇಲೆ ಆಗದಿದ್ದರೆ, ಆಗ ನಿಮ್ಮ ತಪ್ಪು ಇಲ್ಲವೆಂದಾಗುತ್ತದೆ. ಮತ್ತು ನಿಮ್ಮ ಮೇಲೆ ಪರಿಣಾಮವಾದರೆ, ಅದು ನಿಮ್ಮದೇ ತಪ್ಪು ಎಂದಾಗುತ್ತದೆ. ಇದನ್ನು ನಿಶ್ಚಿತವಾಗಿ ಅರ್ಥ ಮಾಡಿಕೊಳ್ಳಿ!

## ಈ ರೀತಿಯ ವಿವೇಚನೆಯನ್ನಾದರೂ ಮಾಡಿ

ತಪ್ಪು ಯಾರದು? ಯಾರು ಕಷ್ಟವನ್ನು ಅನುಭವಿಸುತ್ತಿದ್ದಾರೆ ಎಂಬುದು ಪತ್ತೆಯಾದಾಗ ತಿಳಿಯುತ್ತದೆ. ನೌಕರನ ಕೈಯಿಂದ ಹತ್ತು ಗ್ಲಾಸುಗಳು ಒಡೆದುಹೋದರೆ ಅದರ ಪರಿಣಾಮ ಮನೆಯ ಜನರ ಮೇಲಾಗುತ್ತದೋ ಇಲ್ಲವೋ? ಮತ್ತು ಮನೆಯ ಜನರ ಪೈಕಿ ಮಕ್ಕಳಂತೂ ಏನೂ ಕಷ್ಟಪಡಬೇಕಾಗುವುದಿಲ್ಲ, ಆದರೆ ತಂದೆತಾಯಿ ಒದ್ದಾಡುತ್ತಲೇ ಇರುತ್ತಾರೆ. ಅದರಲ್ಲೂ ಅಮ್ಮ ಸ್ವಲ್ಪ ಸಮಯದ ನಂತರ ಮಲಗಿ ಬಿಡುತ್ತಾಳೆ ಆದರೆ ಅಪ್ಪ, ಐವತ್ತು ರೂಪಾಯಿಗಳಷ್ಟು ನಷ್ಟವಾಯಿತೆಂದು ಲೆಕ್ಕ ಹಾಕುತ್ತಲೇ ಇರುತ್ತಾನೆ. ಆತ ಹೆಚ್ಚು ಅಲರ್ಟ್ ಆಗಿರುತ್ತಾನೆ. ಅವನು ಹೆಚ್ಚು ಕಷ್ಟ ಅನುಭವಿಸುತ್ತಾನೆ. ಅನುಭವಿಸಬೇಕಾಗಿ ಬಂದಿರುವುದು ಅವನ ತಪ್ಪಿನಿಂದ. 'ಯಾರು ಕಷ್ಟಪಡುತ್ತಾರೋ, ತಪ್ಪು ಅವರದ್ದೇ'. ಯಾರು ಈ ರೀತಿ ವಿವೇಚನೆ ಮಾಡುತ್ತಾ ಮುಂದುವರೆಯುತ್ತಾರೋ, ಅವರು ನೇರವಾಗಿ ಮೋಕ್ಷವನ್ನು ತಲುಪುತ್ತಾರೆ.

**ಪ್ರಶ್ನಕರ್ತ:** ಕೆಲವರು ಹೇಗಿರುತ್ತಾರೆಂದರೆ ಅವರಿಗೆ ನಾವು ಎಷ್ಟೇ ಒಳ್ಳೆಯದನ್ನು ಮಾಡಿದರೂ ಅವರು ಅದನ್ನು ಅರ್ಥ ಮಾಡಿಕೊಳ್ಳುವುದೇ ಇಲ್ಲ?

**ದಾದಾಶ್ರೀ:** ಎದುರಿಗಿರುವವರಿಗೆ ಅರ್ಥವಾಗುತ್ತಿಲ್ಲ ಎಂದಾದರೆ ಅದು ನಮ್ಮದೇ ತಪ್ಪಿನ ಪರಿಣಾಮ ಎಂದರ್ಥ. ಬೇರೆಯವರ ದೋಷವನ್ನು ನೋಡುವುದು, ನಿಜಕ್ಕೂ ಒಂದು ತಪ್ಪು. ನಿಮ್ಮದೇ ತಪ್ಪಿನಿಂದಾಗಿ ಯಾವುದೋ ಒಂದು ನಿಮಿತ್ತವಾಗಿ ಬಂದು ನಿಮಗೆ ಕಷ್ಟವನ್ನುಂಟು ಮಾಡುತ್ತದೆ. ಆ ನಿಮಿತ್ತವು ಜೀವ ಇರುವಂಥದ್ದಾಗಿದ್ದರೆ ಅದರೊಂದಿಗೆ ಸೇಡು ತೀರಿಸಿಕೊಳ್ಳಲು ಮುಂದಾಗುತ್ತೀರಿ ಆದರೆ ನಿಮಿತ್ತವು ಮುಳ್ಳಾಗಿ ಚುಚ್ಚಿದರೆ ಏನು

ಮಾಡುತ್ತೀರಿ? ರಸ್ತೆಯಲ್ಲೊಂದು ಮುಳ್ಳಿದ್ದು, ನೂರಾರು ಜನರು ನಡೆದು ಹೋದರೂ ಯಾರಿಗೂ ಚುಚ್ಚಿಕೊಳ್ಳಲಿಲ್ಲ, ಆದರೆ ಚಂದೂಭಾಯ್ ಹೊರಬರುತ್ತಿದ್ದಂತೆಯೇ ಮುಳ್ಳು ಚುಚ್ಚಿಕೊಳ್ಳುತ್ತದೆ. 'ವ್ಯವಸ್ಥಿತ್ ಶಕ್ತಿ' ಹೇಗಿರುತ್ತದೆಂದರೆ, ಯಾರಿಗೆ ಮುಳ್ಳು ಚುಚ್ಚಿಕೊಳ್ಳಬೇಕೋ ಅವರಿಗೇ ಅದು ಚುಚ್ಚುವುದು. ಸಂಯೋಗವು ಎಲ್ಲವನ್ನೂ ಒಟ್ಟುಸೇರಿಸುತ್ತದೆ ಎಂದ ಮೇಲೆ ಅದರಲ್ಲಿ ನಿಮಿತ್ತದ ದೋಷವೇನು?

ನಾನು ನನ್ನ ದೋಷಗಳನ್ನು ಹೇಗೆ ಪತ್ತೆ ಮಾಡಲಿ ಎಂದು ಯಾರಾದರೂ ಕೇಳಿದರೆ, ನೀವು ಎಲ್ಲೆಲ್ಲಿ ಕಷ್ಟಪಡಬೇಕಾಗುತ್ತದೋ ಅವೇ ನಿಮ್ಮ ತಪ್ಪುಗಳಾಗಿವೆ ಎಂದು ಹೇಳುತ್ತೇವೆ. ಇಂತಹ ಕಷ್ಟ ಅನುಭವಿಸಬೇಕಾಗಿ ಬಂದಿದೆಯೆಂದರೆ ನಿನ್ನ ತಪ್ಪು ಏನಿದ್ದಿರಬಹುದು ಎಂಬುದನ್ನು ಪತ್ತೆ ಮಾಡಿಕೊ.

## ಮೂಲ ತಪ್ಪು ಎಲ್ಲಿದೆ?

ತಪ್ಪು ಯಾರದ್ದೋ, ಕಷ್ಟಪಡಬೇಕಾದ್ದೂ ಸಹ ಅವರೇ! ಯಾವ ತಪ್ಪು? ಎಂದು ಕೇಳಿದರೆ, 'ನಾನು ಚಂದೂಭಾಯ್ ಆಗಿದ್ದೇನೆ' ಎಂಬ ನಿಮ್ಮ ನಂಬಿಕೆಯೇ ನಿಮ್ಮ ತಪ್ಪು ಎಂದು ಹೇಳಬೇಕಾಗುತ್ತದೆ. ಏಕೆಂದರೆ ಈ ಜಗತ್ತಿನಲ್ಲಿ ಯಾರೂ ದೋಷಿಯಲ್ಲ, ಹೀಗಾಗಿ ಯಾರೂ ಅಪರಾಧಿಯೂ ಅಲ್ಲವೆಂಬುದು ಸಿದ್ಧವಾಗುತ್ತದೆ.

ದುಃಖ ನೀಡುವವರು ಕೇವಲ ಒಂದು ನಿಮಿತ್ತಮಾತ್ರ, ಮೂಲದಲ್ಲಿರುವ ತಪ್ಪು ತನ್ನದೇ ಆಗಿರುತ್ತದೆ. ಲಾಭವನ್ನು ಉಂಟು ಮಾಡುವವರೂ ನಿಮಿತ್ತವೇ, ನಷ್ಟವನ್ನು ಉಂಟು ಮಾಡುವವರೂ ನಿಮಿತ್ತವೇ, ಎಲ್ಲವೂ ನಮ್ಮ ಹಿಂದಿನ ಲೆಕ್ಕದ ಪ್ರಕಾರ ನಡೆಯುತ್ತದೆ.

*****

# ತನ್ನ ದೋಷಗಳನ್ನು ನೋಡಿಕೊಳ್ಳುವುದಕ್ಕೆ ಒಂದು ಸಾಧನೆ – ಪ್ರತಿಕ್ರಮಣ

## ಕ್ರಮಣ–ಅತಿಕ್ರಮಣ–ಪ್ರತಿಕ್ರಮಣ

ಈ ಸಂಸಾರದಲ್ಲಿ ಏನೆಲ್ಲಾ ನಡೆಯುತ್ತಿದೆಯೋ ಅದು ಕ್ರಮಣ ಆಗಿದೆ. ಅದು ಎಲ್ಲಿಯವರೆಗೆ ಸಹಜರೂಪದಲ್ಲಿ ನಡೆಯುತ್ತದೆಯೋ, ಅಲ್ಲಿಯವರೆಗೂ ಕ್ರಮಣವಾಗಿದೆ. ಆದರೆ ಎಕ್ಸೆಸ್ (ವಿಪರೀತ) ಆದರೆ ಅದನ್ನು ಅತಿಕ್ರಮಣ ಎಂದು ಕರೆಯಲಾಗುತ್ತದೆ. ಯಾರೊಂದಿಗಾದರೂ ಅತಿಕ್ರಮಣ ನಡೆದರೆ, ಅದರಿಂದ ಬಿಡುಗಡೆ ಪಡೆಯಲು ಪ್ರತಿಕ್ರಮಣ ಮಾಡಲೇಬೇಕಾಗುತ್ತದೆ, ಅಂದರೆ ತೊಳೆಯಬೇಕಾಗುತ್ತದೆ, ಆಗಲೇ ಸ್ವಚ್ಛವಾಗುವುದು. ಹಿಂದಿನ ಜನ್ಮದಲ್ಲಿ ಯಾರೋ ಒಬ್ಬರಿಗೆ ಕೆನ್ನೆಗೆ ಬಾರಿಸಬೇಕೆಂದು ಅಂದುಕೊಂಡಿದ್ದರೆ, ಈ ಜನ್ಮದಲ್ಲಿ ಆ ವ್ಯಕ್ತಿ ರೂಪ ತಾಳಿ ಬಂದಾಗ, ಆತನಿಗೆ ನಾಲ್ಕು ಏಟುಗಳು ನೀಡಲ್ಪಡುತ್ತವೆ. ಅದನ್ನು ಅತಿಕ್ರಮಣ ಆಯಿತು ಎಂದು ಹೇಳಲಾಗುತ್ತದೆ ಹಾಗು ಇದಕ್ಕೆ ಪ್ರತಿಕ್ರಮಣ ಅಂದರೆ ಪಶ್ಚಾತ್ತಾಪ ಮಾಡಬೇಕಾಗುತ್ತದೆ. ಎದುರಿನಲ್ಲಿ ಇರುವವರ ಶುದ್ಧಾತ್ಮನನ್ನು ನೆನೆದುಕೊಂಡು, ಅವರನ್ನು ನಿಮಿತ್ತವಾಗಿಟ್ಟುಕೊಂಡು ಪ್ರತಿಕ್ರಮಣ ಮಾಡಬೇಕು.

ಯಾವುದೇ ಕೆಟ್ಟ ಕೆಲಸ ಮಾಡುವುದನ್ನು ಅತಿಕ್ರಮಣ ಎಂದು ಕರೆಯಲಾಗುತ್ತದೆ. ಕೆಟ್ಟ ವಿಚಾರ ಮನಸ್ಸಿಗೆ ಬಂದರೆ, ಅದನ್ನು ಮನದಲ್ಲಿ ಉಂಟಾದ ಒಂದು ಕಲೆ ಎಂದು ಕರೆಯಲಾಗುತ್ತದೆ, ನಂತರ ಅದು ಮನಸ್ಸಿನೊಳಗೆ ಕೊರೆಯತೊಡಗುತ್ತದೆ. ಅದನ್ನು ತೊಳೆಯಲು ಪ್ರತಿಕ್ರಮಣ ಮಾಡಬೇಕಾಗುತ್ತದೆ. ಈ ಪ್ರತಿಕ್ರಮಣದಿಂದ, ಎದುರಿಗಿರುವವರು ನಿಮ್ಮ ಬಗ್ಗೆ ಹೊಂದಿರುವ ಭಾವನೆ ಬದಲಾಗುತ್ತದೆ, ತನ್ನೊಳಗಿನ ಭಾವ ಒಳ್ಳೆಯದಾಗಿದ್ದರೆ ಬೇರೆಯವರ ಭಾವವೂ ಒಳ್ಳೆಯದಾಗಿಬಿಡುತ್ತದೆ. ಏಕೆಂದರೆ, ಪ್ರತಿಕ್ರಮಣದಲ್ಲಂತೂ ಎಂಥಾ ಅದ್ಭುತ ಶಕ್ತಿಯಿದೆಯೆಂದರೆ ಹುಲಿಯೂ ಕೂಡ ನಾಯಿಯಂತಾಗಿಬಿಡುತ್ತದೆ! ಪ್ರತಿಕ್ರಮಣ ಯಾವಾಗ ಪ್ರಯೋಜನಕ್ಕೆ ಬರುತ್ತದೆ? ಯಾವಾಗ ಉಲ್ಟಾ (ವಿರುದ್ಧ) ಪರಿಣಾಮಗಳಾಗುತ್ತವೆಯೋ ಆಗ ಪ್ರಯೋಜನಕ್ಕೆ ಬರುತ್ತದೆ.

## ಪ್ರತಿಕ್ರಮಣದ ಯಥಾರ್ಥ ಅರಿವು

ಪ್ರತಿಕ್ರಮಣ ಎಂದರೆ ಏನು? ಎದುರಿಗಿರುವ ವ್ಯಕ್ತಿ ನಮಗೆ ಅವಮಾನ ಮಾಡಿದರೆ, ಈ ಅವಮಾನಕ್ಕೆ ಕಾರಣನಾದ ತಪ್ಪಿತಸ್ಥ ಯಾರು ಎಂದು ನಾವು ಅರ್ಥ ಮಾಡಿಕೊಳ್ಳಬೇಕು. ಮಾಡುವವನು ತಪ್ಪಿತಸ್ಥನೋ ಅಥವಾ ಕಷ್ಟ ಅನುಭವಿಸುವವನು ತಪ್ಪಿತಸ್ಥನೋ ಎಂಬ

ನಿರ್ಧಾರವನ್ನು ನಾವು ಮೊದಲು ಮಾಡಬೇಕು. ಆಗ ಅವಮಾನ ಮಾಡುವಂತಹ ಆತ ನಿಜಕ್ಕೂ ತಪ್ಪಿತಸ್ಥನಾಗುವುದಿಲ್ಲ. ಆತ ಒಂದು ನಿಮಿತ್ತನಾಗುತ್ತಾನೆ. ನಮ್ಮ ಕರ್ಮ ಉದಯವಾದ ಕಾರಣ ಆ ನಿಮಿತ್ತವು ನಮಗೆ ದೊರಕುತ್ತದೆ. ಇದರರ್ಥವೇನೆಂದರೆ ತಪ್ಪು ನಮ್ಮದೇ ಆಗಿದೆ. ಈಗ ಪ್ರತಿಕ್ರಮಣ ಏಕೆ ಮಾಡಬೇಕಾಗುತ್ತದೆ ಎಂದರೆ, ಎದುರಿಗಿರುವ ವ್ಯಕ್ತಿಯ ಬಗ್ಗೆ ಕೆಟ್ಟ ಭಾವನೆ ನಮ್ಮೊಳಗೆ ಮೂಡಿತು ಎಂಬ ಕಾರಣದಿಂದ. ಆ ವ್ಯಕ್ತಿ ನಿಷ್ಪ್ರಯೋಜಕ, ನೀಚ, ಎಂಬ ವಿಚಾರಗಳು ನಮ್ಮ ಮನದಲ್ಲಿ ಬಂದರೆ ನಾವು ಪ್ರತಿಕ್ರಮಣ ಮಾಡಬೇಕು. ಹಾಗೇ ಯಾವುದೇ ಬೈಗುಳಗಳನ್ನು ನೀಡಿದರೂ, ಅವು ನಮ್ಮ ಲೆಕ್ಕಕ್ಕೇ ಬರುತ್ತವೆ. ಆದರೂ ಜನರು ನಿಮಿತ್ತವನ್ನೇ ಕತ್ತರಿಸುತ್ತಾರೆ (ಅಟ್ಟಿಸಿಕೊಂಡು ಹೋಗುತ್ತಾರೆ) ಮತ್ತು ಅದರಿಂದಲೇ ಈ ಎಲ್ಲಾ ಜಗಳಗಳೂ ಉಂಟಾಗುವುದು.

ಇಡೀ ದಿನ ನಾವು ಮಾಡುವಂತಹ ವ್ಯವಹಾರಗಳ ಪೈಕಿ ಕೆಲವು ಉಲ್ಟಾ (ವಿರುದ್ಧ) ಆಗಿಬಿಟ್ಟರೆ, ಇಂತಿಂಥಾ ಜನರೊಂದಿಗೆ ಉಲ್ಟಾ ವ್ಯವಹಾರ ನಡೆದಿದೆ ಎಂದು ನಮಗೆ ತಿಳಿಯುತ್ತದೆ. ತಿಳಿಯುತ್ತದೋ, ಇಲ್ಲವೋ? ನಾವು ಮಾಡುವಂತಹ ವ್ಯವವಹಾರವೆಲ್ಲವೂ ಕ್ರಮಣವಾಗಿ (ಕ್ರಮಬದ್ಧವಾಗಿ) ನಡೆದಿದ್ದರೂ, ಕೆಲವೊಂದು ಕಡೆ ಯಾರೊಂದಿಗಾದರೂ ಉಲ್ಟಾ ವ್ಯವಹಾರ ನಡೆದಿದ್ದರೆ, ಆ ವ್ಯಕ್ತಿಯೊಂದಿಗೆ ಮಾತು ಒರಟಾಗಿತ್ತು ಅಥವಾ ವರ್ತನೆ ಸರಿಯಿರಲಿಲ್ಲ ಎಂಬುದು ನಮಗೆ ತಿಳಿಯುತ್ತದೋ ಇಲ್ಲವೋ? ಅದನ್ನೇ ಅತಿಕ್ರಮಣ ಎಂದು ಕರೆಯುವುದು.

ಅತಿಕ್ರಮಣ ಎಂದರೆ ನಾವು ಉಲ್ಟಾ (ತಪ್ಪು ನಡಿಗೆ) ಚಲಿಸುವುದು. ಅದೇ ದಾರಿಯಲ್ಲಿ ನೇರವಾಗಿ ವಾಪಸ್ ಬರುವುದರ ಹೆಸರು ಪ್ರತಿಕ್ರಮಣ.

## ಪ್ರತಿಕ್ರಮಣದ ಯಥಾರ್ಥ ವಿಧಿ

**ಪ್ರಶ್ನಕರ್ತ:** ಪ್ರತಿಕ್ರಮಣದಲ್ಲಿ ಏನು ಮಾಡಬೇಕಾಗುತ್ತದೆ?

**ದಾದಾಶ್ರೀ:** ಮನಸ್ಸು-ಮಾತು-ಕ್ರಿಯೆಯ ಯೋಗ, ಭಾವಕರ್ಮ-ದ್ರವ್ಯಕರ್ಮ-ನೋಕರ್ಮ (ಕಾರಣಕರ್ಮ-ಸೂಕ್ಷ್ಮಫಲಿತ-ಸ್ಥೂಲಫಲಿತ), ##ಚಂದೂಲಾಲ್ ಹಾಗು ಚಂದೂಲಾಲ್ ಎಂಬ ಹೆಸರಿಗೆ ಸಂಬಂಧಪಟ್ಟ ಎಲ್ಲಾ ಮಾಯೆಯಿಂದಲೂ ಭಿನ್ನವಾದ 'ಶುದ್ಧಾತ್ಮ'ನನ್ನು ನೆನಪಿಸಿಕೊಳ್ಳುತ್ತಾ, 'ಹೇ ಶುದ್ಧಾತ್ಮ ಭಗವಾನ್! ನಾನು ಜೋರಾಗಿ ಮಾತನಾಡುವ ತಪ್ಪನ್ನು ಮಾಡಿಬಿಟ್ಟೆ, ಅದಕ್ಕಾಗಿ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇನೆ ಹಾಗು ಪುನಃ ಆ ತಪ್ಪನ್ನು ಮಾಡುವುದಿಲ್ಲ ಎಂದು ದೃಢನಿಶ್ಚಯ ಮಾಡುತ್ತೇನೆ, ಇನ್ನೆಂದೂ ಆ ತಪ್ಪನ್ನು

ಮಾಡದಿರುವಂತಹ ಶಕ್ತಿಯನ್ನು ನನಗೆ ನೀಡು' ಎಂದು ಹೇಳಿ. 'ಶುದ್ಧಾತ್ಮವನ್ನು' ನೆನಪಿಸಿಕೊಂಡು ಅಥವಾ ದಾದಾರವನ್ನು ನೆನಪಿಸಿಕೊಂಡು 'ತಪ್ಪಾಯ್ತು' ಎಂದು ಹೇಳಿದಾಗ, ಆ ಆಲೋಚನೆಯು ಆ ತಪ್ಪನ್ನು ತೊಳೆದಂತಾಗುತ್ತದೆ ಅರ್ಥಾತ್ ಪ್ರತಿಕ್ರಮಣ ಆದಂತಾಗುತ್ತದೆ. ಮತ್ತು 'ಇಂತಹ ತಪ್ಪನ್ನು ಮತ್ತೆಂದೂ ಮಾಡುವುದಿಲ್ಲ' ಎಂದು ದೃಢ ನಿರ್ಧಾರ ಮಾಡುವುದು ಪ್ರತ್ಯಾಖ್ಯಾನ್ ಎಂದು ಕರೆಯಲ್ಪಡುತ್ತದೆ. ಎದುರಿಗಿರುವ ವ್ಯಕ್ತಿಗೆ ನಮ್ಮಿಂದ ನಷ್ಟವಾಗುವಂತಹ ಕೆಲಸವನ್ನು ಮಾಡಿದರೆ ಅಥವಾ ಅವರಿಗೆ ನಮ್ಮಿಂದ ದುಃಖವಾಗುವಂಥದ್ದನ್ನು ಮಾಡಿದರೆ, ಅವೆಲ್ಲವೂ ಅತಿಕ್ರಮಣ ಎಂದಾಗುತ್ತವೆ ಮತ್ತು ಅವುಗಳಿಗೆ ತಕ್ಷಣವೇ ಆಲೋಚನೆ, ಪ್ರತಿಕ್ರಮಣ ಮತ್ತು ಪ್ರತ್ಯಾಖ್ಯಾನ್ ಮಾಡಬೇಕಾಗುತ್ತದೆ.

*## ಚಂದುಲಾಲ್ ಇರುವಲ್ಲಿ ಪ್ರತಿಕ್ರಮಣ ವಿಧಿ ಮಾಡುವವರು ತಮ್ಮ ಹೆಸರನ್ನು ಹೇಳುವುದು.*

*****

## ಪ್ರತಿಕ್ರಮಣ ವಿಧಿ–ವಿಧಾನ

ಪ್ರತ್ಯಕ್ಷ ದಾದಾ ಭಗವಾನರ ಸಾಕ್ಷಿಯಾಗಿ, ದೇಹಧಾರಿಯಾದ (ಯಾರೊಂದಿಗೆ ದೋಷಪೂರ್ಣ ನಡವಳಿಕೆಯಿಂದ ವರ್ತಿಸಲಾಯಿತೋ ಆ ವ್ಯಕ್ತಿಯ ಹೆಸರು) ಅವರ, ಮನಸ್ಸು–ಮಾತು–ಕ್ರಿಯೆಯ ಯೋಗ, ಭಾವಕರ್ಮ–ದ್ರವ್ಯಕರ್ಮ–ನೋಕರ್ಮದಿಂದ ಭಿನ್ನರಾದ ಹೇ ಶುದ್ಧಾತ್ಮ ಭಗವಾನ್, ನಿಮ್ಮ ಸಾಕ್ಷಿಯಲ್ಲಿ, ಇಂದಿನವರೆಗೆ ನನ್ನಿಂದ ಏನೆಲ್ಲಾ *##* ತಪ್ಪುಗಳಾಗಿವೆಯೋ, ಅವುಗಳಿಗಾಗಿ ಕ್ಷಮೆ ಯಾಚಿಸುತ್ತೇನೆ. ಹೃತ್ಪೂರ್ವಕವಾಗಿ ಪಶ್ಚಾತ್ತಾಪ ಪಡುತ್ತೇನೆ. ನನ್ನನ್ನು ಕ್ಷಮಿಸಿ, ಕ್ಷಮಿಸಿ, ಕ್ಷಮಿಸಿ. ಮತ್ತು ಇಂತಹ ತಪ್ಪು ಮತ್ತೆಂದೂ ಮಾಡುವುದಿಲ್ಲವೆಂದು ನಾನು ದೃಢನಿಶ್ಚಯ ಮಾಡುತ್ತೇನೆ. ಈ ನಿಶ್ಚಯದಂತೆ ನಡೆಯಲು ನನಗೆ ಪರಮ ಶಕ್ತಿ ನೀಡಿ, ಶಕ್ತಿ ನೀಡಿ, ಶಕ್ತಿ ನೀಡಿ.

*##* ಇಡೀ ಜೀವನದ ಪ್ರಸಂಗಗಳಲ್ಲಿನ ಕೋಪ–ಅಹಂಕಾರ–ಮಾಯೆ–ಲೋಭ, ವಿಷಯ–ವಿಕಾರಗಳು, ಪ್ರಾಪಂಚಿಕ ಆಸೆಗಳು, ಮುಂತಾದವುಗಳ ಕಾರಣದಿಂದ ಯಾರಿಗಾದರೂ ದುಃಖ ಉಂಟು ಮಾಡಿದ್ದರೆ, ಆ ಪ್ರಸಂಗಗಳನ್ನು ಮನಸ್ಸಿನಲ್ಲಿ ನೆನಪಿಸಿಕೊಳ್ಳಬೇಕು.

ಈ ರೀತಿ ಪ್ರತಿಕ್ರಮಣ ಮಾಡುವುದರಿಂದ ಜೀವನವೂ ಚೆನ್ನಾಗಿ ನಡೆಯುತ್ತದೆ ಮತ್ತು ಮೋಕ್ಷ ಮಾರ್ಗದಲ್ಲೂ ಸಾಗಬಹುದು. ಮಹಾವೀರ್ ಭಗವಾನ್, 'ಮಾಡಿದಂತಹ ಅತಿಕ್ರಮಣಗಳಿಗೆ ಪ್ರತಿಕ್ರಮಣ ಮಾಡಿದಾಗಲೇ ಮೋಕ್ಷ ಮಾರ್ಗದಲ್ಲಿ ಮುಂದುವರೆಯಲು ಸಾಧ್ಯ' ಎಂದು ಹೇಳಿದ್ದಾರೆ.

## ತ್ರಿಮಂದಿರದ ನಿರ್ಮಾಣದ ಪ್ರಯೋಜನ

ಶ್ರೀ ಮಹಾವೀರ್ ಭಗವಾನ್, ಶ್ರೀ ಕೃಷ್ಣ ಭಗವಾನ್, ಶ್ರೀ ರಾಮ ಭಗವಾನರಂತಹ ಮೂಲಪುರುಷರು ಸಶರೀರರಾಗಿ ಉಪಸ್ಥಿತರಿದ್ದಾಗ, ಅವರು ಜನರನ್ನು ಧರ್ಮಕ್ಕೆ ಸಂಬಂಧಿಸಿದ ಹಲವು ಅಭಿಪ್ರಾಯಗಳಿಂದ ಹೊರತಂದು, ಆತ್ಮಧರ್ಮದಲ್ಲಿ ಸ್ಥಿರಗೊಳಿಸಿದ್ದರು. ಆದರೆ ಕಾಲಕ್ರಮೇಣ ಮೂಲಪುರುಷರ ಉಪಸ್ಥಿತಿ ಇಲ್ಲವಾದಾಗ ನಿಧಾನವಾಗಿ ಜನರಲ್ಲಿ ಅಭಿಪ್ರಾಯಭೇದಗಳು ಉಂಟಾಗಿ, ಧರ್ಮದಲ್ಲಿ ದೊಡ್ಡದೊಡ್ಡ ಸಂಪ್ರದಾಯಗಳು ಉದ್ಭವಿಸಿ, ಅವುಗಳ ಪರಿಣಾಮಸ್ವರೂಪದಿಂದ ಸುಖಶಾಂತಿಯು ಕ್ರಮೇಣ ಕಡಿಮೆಯಾಗುತ್ತಿದೆ.

ಅಕ್ರಮ ವಿಜ್ಞಾನಿಯಾದ ಪರಮಪೂಜ್ಯ ಶ್ರೀ ದಾದಾ ಭಗವಾನ್‌ರವರು ಜನರಿಗೆ ಆತ್ಮಧರ್ಮವನ್ನು ಪ್ರಾಪ್ತಿ ಮಾಡಿಸಿಕೊಟ್ಟಿದ್ದಷ್ಟೇ ಅಲ್ಲದೆ, ಅದರೊಂದಿಗೆ ಧರ್ಮದಲ್ಲಿ ವ್ಯಾಪಿಸಿಕೊಂಡಂತಹ 'ನನ್ನದು –ನಿನ್ನದು' ಎಂಬ ಜಗಳಗಳನ್ನು ದೂರ ಮಾಡಲು, ಮತ್ತು ಸಂಕೀರ್ಣವಾದ ಧಾರ್ಮಿಕ–ಪಕ್ಷಪಾತಗಳ ದುರಾಗ್ರಹದ ಅಪಾಯಗಳಿಂದ ಜನರನ್ನು ಪಾರು ಮಾಡಲು, ನಿಷ್ಪಕ್ಷಪಾತಿಯಾದ ಒಂದು ಧರ್ಮಸಂಕುಲವನ್ನು ನಿರ್ಮಾಣ ಮಾಡುತ್ತಾ, ಒಂದು ಅದ್ಭುತವಾದ, ಕ್ರಾಂತಿಕಾರಿಯಾದ ಹೆಜ್ಜೆಯನ್ನಿಟ್ಟರು.

ಮೋಕ್ಷದ ಧ್ಯೇಯಕ್ಕೆ ಪೂರ್ಣಾಹುತಿಯಾಗಿ ಶ್ರೀ ಮಹಾವೀರ್ ಸ್ವಾಮಿ ಭಗವಾನರು ಜಗತ್ತಿಗೆ ಆತ್ಮಜ್ಞಾನ ಪ್ರಾಪ್ತಿಯ ಮಾರ್ಗವನ್ನು ತೋರಿದ್ದರು. ಶ್ರೀ ಕೃಷ್ಣ ಭಗವಂತ ಗೀತೆಯ ಉಪದೇಶದಲ್ಲಿ ಅರ್ಜುನನಿಗೆ 'ಆತ್ಮವತ್ ಸರ್ವಭೂತೇಷು' ಎಂಬ ಜ್ಞಾನದೃಷ್ಟಿಯನ್ನು ನೀಡಿದ್ದರು. ಜೀವ ಮತ್ತು ಶಿವರ ನಡುವಿನ ಭೇದ ಇಲ್ಲವಾದಾಗ ನಾವೇ ಶಿವಸ್ವರೂಪರಾಗಿ 'ಚಿದಾನಂದ ರೂಪಂ ಶಿವೋ ಹಮ್ ಶಿವೋ ಹಮ್' ಸ್ಥಿತಿಯನ್ನು ಪ್ರಾಪ್ತಿ ಮಾಡಿಕೊಳ್ಳುತ್ತೇವೆ. ಈ ರೀತಿ, ಎಲ್ಲಾ ಧರ್ಮಗಳ ಮೂಲಪುರುಷರ ಹೃದಯದ ಮಾತು, ಆತ್ಮಜ್ಞಾನದ ಪ್ರಾಪ್ತಿಯ ಕುರಿತಾಗಿಯೇ ಆಗಿತ್ತು. ಈ ವಿಚಾರವನ್ನು ಅರ್ಥಮಾಡಿಕೊಂಡುಬಿಟ್ಟಾಗ, ಆತ್ಮಪ್ರಾಪ್ತಿಯ ಪುರುಷಾರ್ಥ ಆರಂಭವಾಗುತ್ತದೆ, ಹಾಗು ಪ್ರತಿಯೊಬ್ಬರನ್ನೂ ಆತ್ಮದೃಷ್ಟಿಯಿಂದ ನೋಡುವುದರೊಂದಿಗೆ ಅಭೇದಭಾವ ಉತ್ಪನ್ನವಾಗುತ್ತದೆ. ಯಾವುದೇ ಧರ್ಮದ ಖಂಡನೆ–

ಮಂಡನೆ ಮಾಡದೇ, ಯಾವುದೇ ಧರ್ಮದ ಪ್ರಮಾಣಕ್ಕೆ ಧಕ್ಕೆ ತರಬಾರದು ಎಂಬ ಭಾವನೆ ಯಾವಾಗಲೂ ಇರುತ್ತದೆ.

ತಿಳಿದೋ-ತಿಳಿಯದೆಯೋ ಯಾರದ್ದಾದರೂ ವಿರಾಧನೆ (ಘಾಸಿ) ಮಾಡಿದ್ದರೆ, ಆ ಎಲ್ಲರನ್ನೂ ಆರಾಧನೆ ಮಾಡಿದಾಗ ಎಲ್ಲಾ ವಿರಾಧನೆಗಳೂ ತೊಳೆದುಹೋಗುತ್ತವೆ ಎಂದು ದಾದಾ ಭಗವಾನ್ (ದಾದಾಶ್ರೀ) ಹೇಳುತ್ತಿದ್ದರು. ಇಂತಹ ನಿಷ್ಪಕ್ಷಪಾತವಾದ ತ್ರಿಮಂದಿರ ಸಂಕುಲದಲ್ಲಿ ಪ್ರವೇಶಿಸಿ ಎಲ್ಲಾ ದೇವರುಗಳ ಮೂರ್ತಿಗಳ ಮುಂದೆ ತಲೆ ಸಹಜವಾಗಿಯೇ ಬಾಗಿದಾಗ, ಒಳಗಿನ ಎಲ್ಲಾ ಕೊಂಡಿಗಳು, ದುರಾಗ್ರಹಗಳು ಮತ್ತು ಭೇದಭಾವಗಳಿಂದ ತುಂಬಿದ ಎಲ್ಲಾ ನಂಬಿಕೆಗಳೂ ನಾಶವಾಗತೊಡಗುತ್ತವೆ ಮತ್ತು ನಾವು ಆಗ್ರಹರಹಿತರಾಗತೊಡಗುತ್ತೇವೆ.

ದಾದಾ ಭಗವಾನರ ಪರಿವಾರದ ಮುಖ್ಯ ಕೇಂದ್ರ ತ್ರಿಮಂದಿರ ಅಡಾಲಜ್‌ನಲ್ಲಿದೆ. ಅದನ್ನು ಹೊರತುಪಡಿಸಿ ಗುಜರಾತಿನ ಅಹಮದಾಬಾದ್, ರಾಜಕೋಟ್, ಮೋರಬೀ, ಭುಜ್, ಗೋಧರಾ, ಭಾದರಣ್, ಚಲಾಮಲೀ ಮತ್ತು ವಾಸಣಾ (ವಡೋದರಾ ಜಿಲ್ಲೆ), ಮುಂತಾದ ಸ್ಥಳಗಳಲ್ಲಿ ನಿಷ್ಪಕ್ಷಪಾತಿ ತ್ರಿಮಂದಿರಗಳ ನಿರ್ಮಾಣವಾಗಿದೆ, ಮತ್ತು ಇನ್ನೂ ಹಲವೆಡೆ ತ್ರಿಮಂದಿರದ ನಿರ್ಮಾಣದ ಕೆಲಸ ನಡೆಯುತ್ತಿದೆ.

************************************************

**ಜ್ಞಾನವಿಧಿ ಎಂದರೇನು?**

- ಆತ್ಮ ಸಾಕ್ಷಾತ್ಕಾರ ಪಡೆಯಲು ಭೇದಜ್ಞಾನದ ಪ್ರಯೋಗ; ಇದು ಪ್ರಶ್ನೋತ್ತರ ಸತ್ಸಂಗಗಳಿಂದ ಭಿನ್ನವಾದುದು.
- 1958ರಲ್ಲಿ ಪರಮಪೂಜ್ಯ ದಾದಾ ಭಗವಾನ್‌ರವರಿಗೆ ಯಾವ ಆತ್ಮಜ್ಞಾನ ಪ್ರಕಟವಾಗಿತ್ತೋ, ಅದೇ ಆತ್ಮಜ್ಞಾನವನ್ನು ಈಗಲೂ ದಾದಾಶ್ರೀಯವರ ಕೃಪಾಪಾತ್ರರಾದ ಹಾಗೂ 'ಪೂಜ್ಯ ನಿರುಮಾ'ರವರಿಂದ ಆಶೀರ್ವದಿಸಲ್ಪಟ್ಟ 'ಪೂಜ್ಯ ದೀಪಕ್ ಭಾಯ್' ರವರ ಮಾಧ್ಯಮದ ಮೂಲಕ ಪ್ರಾಪ್ತಿ ಮಾಡಿಕೊಳ್ಳಬಹುದಾಗಿದೆ.

**ಜ್ಞಾನವನ್ನು ಏಕೆ ಪಡೆದುಕೊಳ್ಳಬೇಕು?**

- ಜನ್ಮ-ಮರಣದ ಚಕ್ರದಿಂದ ಮುಕ್ತರಾಗಲು.
- ತನ್ನ ಆತ್ಮವನ್ನು ಜಾಗೃತಗೊಳಿಸಲು.
- ಪಾರಿವಾರಿಕ ಸಂಬಂಧಗಳು ಮತ್ತು ಕೆಲಸ-ಕಾರ್ಯಗಳಲ್ಲಿ ಸುಖಶಾಂತಿಯನ್ನು ಅನುಭವಿಸಲು.

**ಜ್ಞಾನವಿಧಿಯಿಂದ ಏನು ಪ್ರಾಪ್ತವಾಗುತ್ತದೆ?**

- ಆತ್ಮಜಾಗೃತಿ ಉಂಟಾಗುತ್ತದೆ.
- ಸರಿಯಾದ ತಿಳಿವಳಿಕೆಯೊಂದಿಗೆ ಜೀವನ-ವ್ಯವಹಾರವನ್ನು ಪೂರ್ಣಗೊಳಿಸುವಂತಹ ಕೀಲಿಕೈಗಳು ಪ್ರಾಪ್ತವಾಗುತ್ತವೆ.
- ಅನಂತಕಾಲದ ಪಾಪಗಳು ಭಸ್ಮೀಭೂತವಾಗುತ್ತವೆ.
- ಅಜ್ಞಾನಮಯ ನಂಬಿಕೆಗಳು ದೂರವಾಗುತ್ತವೆ.
- ಜ್ಞಾನ ಜಾಗೃತಿಯಲ್ಲಿರುವುದರಿಂದ ಹೊಸ ಕರ್ಮಗಳು ಬಂಧನವನ್ನುಂಟು ಮಾಡುವುದಿಲ್ಲ ಹಾಗು ಹಳೆಯ ಕರ್ಮಗಳು ನಾಶವಾಗಿಬಿಡುತ್ತವೆ.

**ಆತ್ಮಜ್ಞಾನ ಪ್ರಾಪ್ತಿಗಾಗಿ ಪ್ರತ್ಯಕ್ಷವಾಗಿ ಬರುವುದು ಅಥವಾ ನೇರವಾದ ಭೇಟಿ ಅವಶ್ಯಕವೇ?**

- ಆತ್ಮಜ್ಞಾನವು ಜ್ಞಾನಿಯ ಕೃಪೆ ಮತ್ತು ಆಶೀರ್ವಾದದ ಫಲವಾಗಿದೆ. ಇದಕ್ಕಾಗಿ ಪ್ರತ್ಯಕ್ಷ ಭೇಟಿ ಅವಶ್ಯಕ.
- ಪೂಜ್ಯ 'ನಿರುಮಾ' ರವರ ಹಾಗು ಪೂಜ್ಯ ದೀಪಕ್ ಭಾಯ್ ರವರ ಟಿವಿ ಅಥವಾ ವಿಸಿಡಿ ಸತ್ಸಂಗ ಕಾರ್ಯಕ್ರಮ ಮತ್ತು ದಾದಾಜೀರವರ ಪುಸ್ತಕಗಳು ಜ್ಞಾನದ ಭೂಮಿಕೆಯನ್ನು ಸಿದ್ಧಗೊಳಿಸಬಲ್ಲವು, ಆದರೆ ಆತ್ಮಸಾಕ್ಷಾತ್ಕರ ಮಾಡಿಸಲು ಅವುಗಳಿಂದ ಸಾಧ್ಯವಿಲ್ಲ.
- ಬೇರೆ ಸಾಧನೆಗಳಿಂದ ಖಂಡಿತವಾಗಿ ಶಾಂತಿ ದೊರೆಯುತ್ತದೆ, ಆದರೆ ಹೇಗೆ ಪುಸ್ತಕದಲ್ಲಿ ಚಿತ್ರಿಸಲಾದ ದೀಪವು ಪ್ರಕಾಶವನ್ನು ನೀಡಲು ಸಾಧ್ಯವಿಲ್ಲವೋ ಹಾಗು ಹೇಗೆ ಪ್ರತ್ಯಕ್ಷವಾಗಿ ಬೆಳಗಿದ ದೀಪವು ಮಾತ್ರ ಪ್ರಕಾಶವನ್ನು ನೀಡಬಲ್ಲುದೋ, ಹಾಗೇ ಆತ್ಮವನ್ನು ಜಾಗೃತಗೊಳಿಸಲು ಖುದ್ದಾಗಿ ಬಂದು ಜ್ಞಾನಪ್ರಾಪ್ತಿ ಮಾಡಿಕೊಳ್ಳುವುದು ಅವಶ್ಯಕವಾಗುತ್ತದೆ.
- **ಜ್ಞಾನಪ್ರಾಪ್ತಿಗಾಗಿ ಧರ್ಮ ಅಥವಾ ಗುರುವನ್ನು ಬದಲಿಸಬೇಕಾಗಿಲ್ಲ.**
- **ಜ್ಞಾನವು ಅಮೂಲ್ಯವಾದುದು, ಅದರ ಪ್ರಾಪ್ತಿಗಾಗಿ ಯಾವುದೇ ಬೆಲೆ ನೀಡಲು ಸಾಧ್ಯವಿಲ್ಲ; ನೀಡುವುದು ಅಗತ್ಯವಿಲ್ಲ.**

# ದಾದಾ ಭಗವಾನ್ ಫೌಂಡೇಶನ್‌ನಿಂದ ಪ್ರಕಾಶಿತವಾದ ಹಿಂದಿ ಪುಸ್ತಕಗಳು

1. ಜ್ಞಾನಿ ಪುರುಷ್ ಕೀ ಪಹಚಾನ್
2. ಸರ್ವ್ ದುಃಖೋಂ ಸೇ ಮುಕ್ತಿ
3. ಕರ್ಮ್ ಕಾ ಸಿದ್ಧಾಂತ್
4. ಆತ್ಮಬೋಧ್
5. ಅಂತಃಕರಣ್ ಕಾ ಸ್ವರೂಪ್
6. ಜಗತ್ ಕರ್ತಾ ಕೌನ್?
7. ಭುಗತೇ ಉಸೀ ಕಾ ಭೂಲ್
8. ಅಡ್ಜಸ್ಟ್ ಎವೆರಿವ್ಹೇರ್
9. ಟಕರಾವ್ ಟಾಲಿಏ
10. ಹುಆ ಸೋ ನ್ಯಾಯ್
11. ಚಿಂತಾ
12. ಕ್ರೋಧ್
13. ಮೈ ಕೌನ್ ಹೂಂ?
14. ವರ್ತಮಾನ್ ತೀರ್ಥಂಕರ್ ಶ್ರೀ ಸೀಮಂಧರ್ ಸ್ವಾಮಿ
15. ಮಾನವ ಧರ್ಮ
16. ಸೇವಾ–ಪರೋಪಕಾರ
17. ತ್ರಿಮಂತ್ರ್
18. ಭಾವನಾ ಸೇ ಸುಧರೇ ಜನ್ಮೋಂಜನ್ಮ್
19. ದಾನ್
20. ಮೃತ್ಯು ಸಮಯ್, ಪಹಲೇ ಔರ್ ಪಶ್ಚಾತ್
21. ದಾದಾ ಭಗವಾನ್ ಕೌನ್?
22. ಸತ್ಯ–ಅಸತ್ಯ ಕೇ ರಹಸ್ಯ
23. ಪ್ರೇಮ್
24. ಅಹಿಂಸಾ
25. ಪ್ರತಿಕ್ರಮಣ್ (ಸಂ.)
26. ಪಾಪ್–ಪುಣ್ಯ
27. ಕರ್ಮ್ ಕಾ ವಿಜ್ಞಾನ್
28. ಚಮತ್ಕಾರ್
29. ವಾಣೀ, ವ್ಯವಹಾರ್ ಮೇಂ...
30. ಪೈಸೋಂ ಕಾ ವ್ಯವಹಾರ್ (ಸಂ.)
31. ಪತಿ–ಪತ್ನೀ ಕಾ ದಿವ್ಯ ವ್ಯವಹಾರ್ (ಸಂ.)
32. ಮಾತಾ–ಪಿತಾ ಔರ್ ಬಚ್ಚೋಂ ಕಾ ವ್ಯವಹಾರ್ (ಸಂಕ್ಷಿಪ್ತ)
33. ಸಮಝ್ ಸೇ ಪ್ರಾಪ್ತ್ ಬ್ರಹ್ಮಚರ್ಯ್ (ಸಂ.)
34. ನಿಜದೋಷ್ ದರ್ಶನ್ ಸೇ ... ನಿರ್ದೋಷ್
35. ಕ್ಲೇಶ್ ರಹಿತ್ ಜೀವನ್
36. ಗುರು–ಶಿಷ್ಯ
37. ಆಪ್ತವಾಣೀ – 1
38. ಆಪ್ತವಾಣೀ – 3
39. ಆಪ್ತವಾಣೀ – 4
40. ಆಪ್ತವಾಣೀ – 5
41. ಆಪ್ತವಾಣೀ – 6
42. ಆಪ್ತವಾಣೀ – 7
43. ಸಮಝ್ ಸೇ ಪ್ರಾಪ್ತ್ ಬಹ್ಮಚರ್ಯ್ (ಉತ್ತರಾರ್ಧ್)

★ ದಾದಾ ಭಗವಾನ್ ಫೌಂಡೇಶನ್‌ನಿಂದ ಗುಜರಾತಿ ಭಾಷೆಯಲ್ಲೂ ಹಲವಾರು ಪುಸ್ತಕಗಳು ಪ್ರಕಾಶಿತವಾಗಿವೆ. ಜಾಲತಾಣ www.dadabhagwan.org ನಲ್ಲಿ ಸಹ ನೀವು ಈ ಎಲ್ಲಾ ಪುಸ್ತಕಗಳನ್ನು ಪಡೆಯಬಹುದು.

★ ದಾದಾ ಭಗವಾನ್ ಫೌಂಡೇಶನ್‌ನಿಂದ ಪ್ರತಿ ತಿಂಗಳು ಹಿಂದಿ, ಗುಜರಾತಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ “ದಾದಾವಾಣಿ' ಮ್ಯಾಗಜಿನ್ ಪ್ರಕಾಶಿತವಾಗುತ್ತದೆ.

# ಪ್ರಾಪ್ತಿಸ್ಥಾನ್

## ದಾದಾ ಭಗವಾನ್ ಪರಿವಾರ್

| | | |
|---|---|---|
| **ಅಡಾಲಜ್** | : | ತ್ರಿಮಂದಿರ್ ಸಂಕುಲ್, ಸೀಮಂಧರ್ ಸಿಟಿ, ಅಹಮದಾಬಾದ್–ಕಲೋಲ್ ಹೈವೇ, ಪೋಸ್ಟ್: ಅಡಾಲಜ್, ಜಿ. – ಗಾಂಧೀನಗರ್, ಗುಜರಾತ್ – 382421. ಫೋನ್: (079) 39830100, ಇಮೇಲ್: info@dadabhagwan.org |
| **ಅಹಮದಾಬಾದ್** | : | ದಾದಾ ದರ್ಶನ್, 5, ಮಮತಾಪಾರ್ಕ್ ಸೊಸೈಟಿ, ನವಗುಜರಾತ್ ಕಾಲೇಜಿನ ಹಿಂಭಾಗದಲ್ಲಿ, ಉಸ್ಮಾನ್‌ಪುರಾ, ಅಹಮದಾಬಾದ್ – 380014, ಫೋನ್: (079) 27540408 |
| **ರಾಜಕೋಟ್** | : | ತ್ರಿಮಂದಿರ್, ಅಹಮದಾಬಾದ್–ರಾಜಕೋಟ್ ಹೈವೇ, ತರಘಡಿಯಾ ಚೋಕಡೀ (ಸರ್ಕಲ್), ಪೋಸ್ಟ್: ಮಾಲಿಯಾಸಣ್, ಜಿ. – ರಾಜಕೋಟ್. ಫೋನ್: 9274111393 |
| **ಭುಜ್** | : | ತ್ರಿಮಂದಿರ್, ಹಿಲ್ ಗಾರ್ಡನ್ ಹಿಂಭಾಗದಲ್ಲಿ, ಏರ್‌ಪೋರ್ಟ್ ರಸ್ತೆ, ಫೋನ್: (02832) 290123 |
| **ಗೋಧರಾ** | : | ತ್ರಿಮಂದಿರ್, ಭಾಮೈಯಾ ಗಾಂವ್, ಎಫ್‌ಸಿಐ ಗೋಡಾನ್ ಮುಂದೆ, ಗೋಧರಾ (ಜಿ.–ಪಂಚಮಹಲ್) ಫೋನ್: (02672) 262300 |
| **ವಡೋದರಾ** | : | ದಾದಾ ಮಂದಿರ್, 17, ಮಾಮಾ ಕೀ ಪೋಲ್–ಮೊಹಲ್ಲಾ, ರಾವಪುರಾ ಪೋಲಿಸ್ ಸ್ಟೇಷನ್ ಎದುರು, ಸಲಾಟವಾಡಾ, ವಡೋದರಾ. ಫೋನ್: (0265) 2414142 |

| | | | |
|---|---|---|---|
| ಮುಂಬಯಿ | : 9323528901 | ದೆಹಲಿ | : 9810098564 |
| ಕೊಲ್ಕತ್ತಾ | : 033–32933885 | ಚೆನ್ನೈ | : 9380159957 |
| ಜಯಪುರ್ | : 9351408285 | ಭೂಪಾಲ | : 9425024405 |
| ಇಂದೋರ್ | : 9893545351 | ಜಬಲ್‌ಪುರ್ | : 9425160428 |
| ರಾಯ್‌ಪುರ್ | : 9329523737 | ಭಿಲಾಈ | : 9827481336 |
| ಪಟ್ನಾ | : 9431015601 | ಅಮರಾವತೀ | : 9422915064 |
| ಬೆಂಗಳೂರು | : 9590979099 | ಹೈದರಾಬಾದ್ | : 9989877786 |
| ಪೂನಾ | : 9422660497 | ಜಲಂಧರ್ | : 9814063043 |

**ಯು.ಎಸ್.ಎ.:** **ದಾದಾ ಭಗವಾನ್ ವಿಜ್ಞಾನ್ ಇನ್ಸ್ಟಿಟ್ಯೂಟ್:**
100, ಎಸ್.ಡಬ್ಲ್ಯು. ರೆಡ್‌ಬಡ್ ಲೇನ್, ಟೊಪೆಕಾ, ಕನ್ಸಸ್ 66606
ದೂರವಾಣಿ: +1 877–505– DADA (3232)
ಇಮೇಲ್: info@us.dadabhagwan.org

| | | | |
|---|---|---|---|
| **ಯು.ಕೆ.:** | **+44330 111 (3232)** | **ಯುಎಇ:** | **+971 557316937** |
| **ಕೀನ್ಯಾ:** | **+254 722 722 063** | **ಸಿಂಗಪೂರ್:** | **+65 81129229** |
| **ಆಸ್ಟ್ರೇಲಿಯಾ:** | **+61 421127947** | **ನ್ಯೂಜಿಲ್ಯಾಂಡ್:** | **+64 21 0376434** |

**ಜಾಲತಾಣ:** www. Dadabhagwan.org



# ಜ್ಞಾನವಿಧಿ

ಜ್ಞಾನವಿಧಿಯು, ಅನಂತ ಜನ್ಮಗಳಿಂದ ತನ್ನ ನಿಜಸ್ವರೂಪದ, ಆತ್ಮಸ್ವರೂಪದ ಅನುಭವಕ್ಕಾಗಿ ಕಾತರಿಸಿದ ಮುಮುಕ್ಷುಗಳಿಗಾಗಿ ಜ್ಞಾನೀಪುರುಷ ಪೂಜ್ಯ ದಾದಾ ಭಗವಾನರ ಅಕ್ರಮ ವಿಜ್ಞಾನದ ಮಾಧ್ಯಮದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಕೊಟ್ಟ ಅಮೂಲ್ಯ ಉಡುಗೊರೆ. ಜ್ಞಾನವಿಧಿಯು, 'ನಾನು' (ಆತ್ಮ) ಮತ್ತು 'ನನ್ನ' (ಮನ–ವಚನ–ಕಾಯಾ) ನಡುವೆ ಭೇದರೇಖೆಯನ್ನು ಹಾಕುವಂತಹ, ಜ್ಞಾನೀಪುರುಷರ ವಿಶೇಷ ಆಧ್ಯಾತ್ಮಿಕ ಸಿದ್ಧಿಯ ಮೂಲಕ ಆಗುವಂತಹ ಜ್ಞಾನಪ್ರಯೋಗ. ಈ ಆತ್ಮಜ್ಞಾನದಿಂದ ಶಾಶ್ವತ ಆನಂದದ ಪ್ರಾಪ್ತಿಯಾಗುತ್ತದೆ ಮತ್ತು ಚಿಂತೆಗಳಿಂದ ಮುಕ್ತರಾಗುತ್ತಾ ಹೋಗುತ್ತೇವೆ. ಸಾಂಸಾರಿಕ ಸಂಬಂಧ ಶಾಂತಿಯುತವಾಗುತ್ತಾ ಹೋಗುತ್ತದೆ ಮತ್ತು ವ್ಯಾವಹಾರಿಕ ಗೊಂದಲಗಳಿಗೆ ಸಮಾಧಾನವನ್ನು ಪ್ರಾಪ್ತ ಮಾಡಿಕೊಳ್ಳಲು ಉಪಯೋಗಿ ಎಂದು ಸಾಬೀತಾಗುತ್ತದೆ.

– ದಾದಾಶ್ರೀ




dadabhagwan.org




Printed in India

Price ₹10